# ಜೀವತತ್ತ್ವ ಚಿಂತನೆ

ಸಂಪಾದಕರು :
ಶ್ರೀನಿವಾಸ ಸು. ಮಠದ

ಗೀತಾ ಪ್ರಕಾಶನ,
ಅಜರೇಕರ ಚಾಳ, ವಿಜಾಪುರ

JEEVA TATTVA CHINTANE - A Study
by Srinivas S. Mathad, B.Sc., M.A.
Recipient of *"Parimala Prashasti', 'Jnanajyoti' Award & Haridas Sahitya Seva Praveena*
Ajarekar Chal
Meenaxi Chowk
BIJAPUR - 586 101

Mobile No. : 9972078061

First Edition : 2010

Copies : 1000

Pages : 144



Publisher : Geeta Prakashana,
Ajarekar Chal
Meenaxi Chowk
BIJAPUR - 586 101
Phone - 08352-258362

Cover Design : Shri Srinidhi Satenahalli

Typeset & Printed at : **Vagartha**, N.R. Colony, Bangalore-19.

ಶ್ರೀದಿಗ್ವಿಜಯರಾಮೋ ವಿಜಯತೇ
ಶ್ರೀಮಜ್ಜಗದ್ಗುರು ಮಧ್ವಾಚಾರ್ಯ ಮೂಲಮಹಾಸಂಸ್ಥಾನ ಉತ್ತರಾದಿಮಠ
ಶ್ರೀಮತ್‌ಪರಮಹಂಸ ಪರಿವ್ರಾಜಕಾಚಾರ್ಯೆತ್ಯಾದ್ಯನೇಕ ಗುಣಗಣಾಲಂಕೃತ ಪದವಾಕ್ಯಪ್ರಮಾಣ
ಪಾರಾವಾರ ಪಾರೀಣ ಶ್ರೀಮದ್‌ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಶ್ರೀಮನ್‌ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀಮೂಲರಾಮ, ದಿಗ್ವಿಜಯರಾಮ, ವೇದವ್ಯಾಸ ಪಾದಪದ್ಮಾರಾಧಕರಾದ
**ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಕರಕಮಲ ಸಂಜಾತರಾದ**

## ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ಅನುಗ್ರಹ ಸಂದೇಶ



ದೇಹವೇ ಜೀವನಾದರೆ ದೇಹ ನಶಿಸಿದ ಮೇಲೆ ಪರಲೋಕದಲ್ಲಿ ಅಥವಾ ಜನ್ಮಾಂತರದಲ್ಲಿ ಸುಖಪಡುವ ಆಶೆಯೇ ಇಲ್ಲ. ಹೀಗಾಗಿ ಆಸ್ತಿಕರು ಸತ್ಕರ್ಮಗಳನ್ನು ಮಾಡುವ ಮೊದಲು ದೇಹದಿಂದ ಹೊರತಾದ ಜೀವನ ಅಸ್ತಿತ್ವವನ್ನು

ಚೆನ್ನಾಗಿ ಮನಗಂಡು ಮುಂದುವರೆಯಬೇಕು. ಶ್ರೀಮದಾಚಾರ್ಯರು ತಿಳಿಸಿದಂತೆ ''ಪ್ರತಿಯೊಬ್ಬರಿಗೂ ನನ್ನ ದೇಹ ಎಂಬ ಅನುಭವವೇ ಇದೆ. ನಾನು ದೇಹ ಎಂಬ ಅನುಭವವಿಲ್ಲ''. ಆದರೂ ಸ್ಪಷ್ಟವಾದ ತಿಳುವಳಿಕೆಗೆ ಶಾಸ್ತ್ರದ ಮೊರೆ ಹೋಗಬೇಕು.

ಈ ನಿಟ್ಟಿನಲ್ಲಿ ನಮ್ಮ ಪ್ರಿಯಶಿಷ್ಯರಾದ ಪಂ|| ಶ್ರೀನಿವಾಸಾಚಾರ್ಯ. ಸು. ಮಠದ ಇವರು ಜೀವರ ಅಸ್ತಿತ್ವ, ಅವರ ಸ್ವರೂಪ, ದೇಹಗಳು, ಕರ್ತೃತ್ವ, ವ್ಯಾಪ್ತಿ ಮೊದಲಾದ ವಿಷಯಗಳನ್ನೊಳಗೊಂಡ ವ್ಯಾಸಸಾಹಿತ್ಯ ಮತ್ತು ದಾಸಸಾಹಿತ್ಯಗಳ ಆಧಾರದೊಂದಿಗೆ ''ಜೀವತತ್ತ್ವಚಿಂತನೆ'' ಎಂಬ ಸುಂದರವಾದ, ಜಿಜ್ಞಾಸುಗಳಿಗೆಉಪಯುಕ್ತವಾದ ಗ್ರಂಥವನ್ನು ರಚಿಸಿದ್ದಾರೆ. ಸಜ್ಜನರು ಇದರ ಲಾಭ ಪಡೆಯುವುದು.

ಇವರಿಗೆ ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ, ದಿಗ್ವಿಜಯರಾಮ, ವೇದವ್ಯಾಸರು ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಮುಕ್ಕಾಮ್-ಹೊಳೆನರಸೀಪುರ

ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

# ಆಶೀರ್ವಚನ

ಶ್ರೀಗೋವಿಂದರಾಜೋ ವಿಜಯತೇ

ಭಗವಂತನ ಸ್ವತಂತ್ರತ್ವವನ್ನು ಚೆನ್ನಾಗಿ ತಿಳಿದಿರುವಂತೆ – ''ಜೀವ''ನ ಅಸ್ವತಂತ್ರತೆ-ಯನ್ನು ಪ್ರತಿಯೊಬ್ಬರೂ ತಿಳಿದಿರಬೇಕು ಅಷ್ಟೇ ಅಲ್ಲ ''ಜೀವ''ನ ಸ್ವರೂಪ,ಗುಣ, ಲಕ್ಷಣಗಳನ್ನು ಕೂಡ ತಿಳಿಯುವದು ಅವಶ್ಯವೇ ಆಗಿದೆ.

ಈ ಕಾರಣದಿಂದ ನಮ್ಮ ಪ್ರಿಯಶಿಷ್ಯ ಶ್ರೀನಿವಾಸ ಸು ಮಠದ ಈತನು ''ಜೀವ ತತ್ವಚಿಂತನೆ'' ಎಂಬ ಚಿಕ್ಕ ಪುಸ್ತಕವನ್ನು ಬರೆದು ಅದರಲ್ಲಿ ''ಜೀವನ'' ಕುರಿತಂತೆ ಅನೇಕ ವಿಚಾರ ಪೂರ್ಣ ಲೇಖನಗಳನ್ನು ಅಳವಡಿಸಿದ್ದಾನೆ. ಜೀವನ ಸ್ವರೂಪವನ್ನು ತಿಳಿಯಲು ಇದು ಬಹಳ ಉಪಯುಕ್ತವಾಗಿದೆ. ಇದರ ಸದುಪಯೋಗವನ್ನು ಮಾಡಿಕೊಂಡು ಸಜ್ಜನರು ಆ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.

ಈ ಕೃತಿ ರಚನೆ ಮಾಡಿದ ಶ್ರೀನಿವಾಸ. ಸು ಮಠದ ಇವನಿಗೆ ಜ್ಞಾನ, ಭಕ್ತಿ ವೈರಾಗ್ಯಾದಿಗಳು ಲಭಿಸಲಿ ಎಂಬುದಾಗಿ ಬಾದರಾಯಣಾಭಿನ್ನ ಶ್ರೀಗೋವಿಂದ ರಾಜರಲ್ಲಿ ಪ್ರಾರ್ಥಿಸುತ್ತೇವೆ.

ವಿಜಾಪುರ
27. 6. 09

**ಪಂ|| ತ್ರಿವಿಕ್ರಮಾಚಾರ್ಯ ಉಮರ್ಜಿ**
ವಿಜಯಪುರ

# ಲೇಖಕನ ನುಡಿ

ಭಗವಂತನ ಪ್ರೇರಣೆಯಂತೆ "ಜೀವ-ತತ್ವಚಿಂತನೆ" ಕೃತಿಯಲ್ಲಿ 'ಜೀವ'ನ ಕುರಿತಂತೆ ಕೆಲವು ಸಂಗ್ರಹ ಲೇಖನಗಳನ್ನು ಕೊಟ್ಟಿದ್ದೇನೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀಶ್ರೀನಿವಾಸದೇವರ - ಅಡಿದಾವರೆಗಳಲ್ಲಿ ಭಕ್ತಿ ಪೂರ್ವಕ ಸಮರ್ಪಿಸಿದ್ದೇನೆ.

ಕೃತಿ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀ ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾ ಪೂರ್ವಕ ಶಿ॥ ಸಾ॥ ನಮಸ್ಕಾರಗಳು.

ಕೃತಿಯನ್ನು ಪರಿಶೀಲಿಸಿ ಸಲಹೆಗಳನ್ನಿತ್ತ ಶ್ರೀ ಪಂ ॥ ಮಧ್ವಾಚಾರ್ಯ ಮೊಖಾಶಿ, ಪಂ॥ ಶ್ರೀ ಸಂಜೀವಾಚಾರ್ಯ ಮದಭಾವಿ ಅವರಿಗೆ ನನ್ನ ಶಿ॥ ಸಾ॥ ನಮಸ್ಕಾರಗಳು

ಕೃತಿಯು ಹೊರ ಬರಲು ಸಹಾಯ ಮಾಡಿದ ಶ್ರೀ ಪಂ॥ ಪ್ರದ್ಯುಮ್ನಾಚಾರ್ ಪೂಜಾರ ಇವರಿಗೆ ನನ್ನ ನಮಸ್ಕಾರಗಳು ಹಾಗೂ ನನ್ನ ತಮ್ಮ ಚಿ॥ ವಾದಿರಾಜ ಮಠದ, ನನ್ನ ಸುಪುತ್ರ ಚಿ॥ ಆನಂದತೀರ್ಥ ಮಠದ, ಶ್ರೀ ರಾಘವೇಂದ್ರ ಅಡಬಡ್ಡಿ ಅವರಿಗೆ ನನ್ನ ಆಶೀರ್ವಾದಗಳು.

ಈ ಕೃತಿಯ ಮುದ್ರಣಕ್ಕೆ ನನ್ನ ಅಳಿಯಂದಿರಾದ ಶ್ರೀ ಸೇತುರಾಮ ನವರತ್ನ ಅವರು ಧನಸಹಾಯ ನೀಡಿದ್ದಾರೆ. ಅವರಿಗೆ ಶ್ರೀಹರಿವಾಯುಗಳು ಅನುಗ್ರಹಿಸಲಿ.

ಈ ಕೃತಿಯ ಮುದ್ರಣಕ್ಕೆ ಶ್ರೀ ಡಿ.ವಿ. ಕೃಷ್ಣಮೂರ್ತಿಯವರು ಶ್ರೀ ರಾಘವೇಂದ್ರ ದರ್ಶನ ಕೇಂದ್ರ ಕೆಂಗೇರಿಉಪನಗರ ಬೆಂಗಳೂರು ಅವರ ವತಿಯಿಂದ ಧನಸಹಾಯ ನೀಡಿದ್ದಾರೆ. ಅವರಿಗೆ ನನ್ನ ಕೃತಜ್ಞತಾ ಪೂರ್ವಕ ಧನ್ಯವಾದಗಳು.

ಈ ಕೃತಿಯ ಮುದ್ರಣಕ್ಕೆ ಬೆಂಗಳೂರು ನಿವಾಸಿಗಳಾದ ಶ್ರೀಯುತ ಬನಾಜಿ ಶ್ರೀನಿವಾಸಮೂರ್ತಿ ಅವರು ತಮ್ಮ ಪುತ್ರ ದಿ॥ ಕೇಶವನ ಸ್ಮರಣಾರ್ಥ ಧನಸಹಾಯ ನೀಡಿದ್ದಾರೆ. ಶ್ರೀಹರಿವಾಯುಗಳು ದಿ॥ ಕೇಶವನಿಗೆ ಸದ್ಗತಿ ನೀಡಲಿ.

ಈ ಕೃತಿಯ ಮುದ್ರಣಕ್ಕೆ ಅಳಿಯಂದಿರಾದ ಡಾ॥ ಪ್ರಸನ್ನ ವಸಂತರಾವ ಹಬ್ಬು ಹಾಗೂ ಕುಂ.ಸೌ. ಡಾ॥ ಸಹನಾ ಹಬ್ಬು ಇವರು ತಮ್ಮ ಸುಪುತ್ರರಾದ ಚಿ॥ ಸಮೀರ ಈತನ ಜಾವಳ ಹಾಗೂ ಚಿ॥ ಹೃಷೀಕೇಶನ ಉಪನಯನ ಸಮಾರಂಭಗಳ ಸವಿನೆನಪಿಗಾಗಿ ಧನಸಹಾಯ ನೀಡಿದ್ದಾರೆ. ಶ್ರೀ ಹರಿವಾಯುಗಳು ಇಬ್ಬರೂ ಚಿರಂಜೀವಿಗಳಿಗೆ ಆಯುರಾರೋಗ್ಯ ಜ್ಞಾನ ಭಕ್ತ್ಯಾದಿಗಳನ್ನು ಕೊಡಲಿ.

ಈ ಕೃತಿಯನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಮೆ॥ ವಾಗರ್ಥ ಮುದ್ರಣಾಲಯ ಬೆಂಗಳೂರು ಇವರಿಗೆ ಧನ್ಯವಾದಗಳು.

ವಿಜಾಪುರ
27.6.10

ಇತಿ ಸಜ್ಜನ ಸೇವಕ
ಶ್ರೀನಿವಾಸ ಸು. ಮಠದ

# ವಿಷಯಾನುಕ್ರಮಣಿಕಾ

ಜೀವೇಶ ಸಂಬಂಧ



ಜೀವನ ಕರ್ತವ್ಯಗಳು



ಹರಿದಾಸರು ಕಂಡ ಜೀವ



ಅನುಬಂಧ - I

# ಜೀವನಿದ್ದಾನೆಯೇ? ಒಂದು ಜಿಜ್ಞಾಸೆ

ಈ ಪ್ರಪಂಚದಲ್ಲಿ ದೇಹಾತಿರಿಕ್ತವಾದ ಜೀವನು ಇದ್ದಾನೆಯೇ? ಎಂದು ಪ್ರಶ್ನೆ ಕೇಳುವವರಿದ್ದಾರೆ. ಅವರಲ್ಲಿ ಚಾರ್ವಾಕರು ಮೊದಲಿಗರು. ಅವರು ಹೇಳುವಂತೆ "ನಾನು" ಎಂಬ ಅನುಭವದಲ್ಲಿ ವಿಷಯವಾಗಿರುವದು ದೇಹವೇ ಹೊರತು ಅದಕ್ಕಿಂತ ಬೇರೆಯಾದ ನಿತ್ಯವಾದ ವಸ್ತುವೇ ಇಲ್ಲ. ಚೈತನ್ಯ ವಿಶಿಷ್ಟದೇಹವೇ ಆತ್ಮ.

ಚಾರ್ವಾಕರು ಮುಂದುವರಿದು ಹೇಳುತ್ತಾರೆ. ಬದುಕಿರುವವರೆಗೂ ಸುಖವಾಗಿರಬೇಕು. ಸಾಲ ಮಾಡಿಯಾದರೂ ತುಪ್ಪ ಕುಡಿಯಬೇಕು. ಭಸ್ಮವಾಗಿ ಹೋದ ಶರೀರ (ದೇಹ) ಮತ್ತೆ ಹುಟ್ಟಿಬರುವದು ಹೇಗೆ?[1] ಹಾಗಾಗಿ ದೇಹ ಬಿಟ್ಟು "ಜೀವ"ನೆಂಬುವನು ಇಲ್ಲವೇ ಇಲ್ಲ.

ಆದರೆ ದೇಹವನ್ನು ಹೊಂದಿದ ಯಾರಿಗೂ "ತಾನೇ ದೇಹ" ಎಂಬ ಅನುಭವ ಬಂದಿಲ್ಲ. ಬದಲಾಗಿ "ತನ್ನ ದೇಹ" ಎಂಬುದಾಗಿ "ದೇಹದಿಂದ ತಾನು ಬೇರೆ" ಎಂದೇ ಸಕಲರ ಅನುಭವವೂ ಇದೆ.

ಶ್ರೀಕೃಷ್ಣ ಭಗವದ್ಗೀತೆಯಲ್ಲಿ ಹೇಳುತ್ತಾನೆ – ಈ ದೇಹದಲ್ಲಿ ಬಾಲ್ಯ, ಯೌವನ, ಮುಪ್ಪು ಮೊದಲಾದವುಗಳ ಅನುಭವ ಉಂಟಾಗುವುದು ದೇಹವುಳ್ಳ, ದೇಹಕ್ಕಿಂತ ಬೇರೆಯಾದ ಜೀವನಿಗೇ ಹೊರತು ಜಡವಾದ ದೇಹಕ್ಕಲ್ಲ. ಆದ್ದರಿಂದ ದೇಹಾತಿರಿಕ್ತ ಆತ್ಮನೊಬ್ಬನಿದ್ದಾನೆ. ಅನೇಕ ಬಾಲ್ಯಾದಿ ದೇಹಗಳ ಅನುಭವ ಒಬ್ಬನಿಗೇ ಆಗುವುದರಿಂದ ಅನೇಕ ಅವಸ್ಥೆಗಳು ಒಬ್ಬ ಆತ್ಮನಿಗೆ ಕ್ರಮವಾಗಿ ಬರುತ್ತವೆ ಎಂಬುದು ಸಿದ್ಧವಾಗುತ್ತದೆ. ಹಾಗೆಯೇ ಮರಣಾನಂತರದ ಇನ್ನೊಂದು ದೇಹವು ಒಬ್ಬನೇ ಆತ್ಮನಿಗೆ ಬರುತ್ತದೆ. ಆದ್ದರಿಂದ ದೇಹಕ್ಕಿಂತ ಬೇರೆಯಾದ ಆತ್ಮನೇ ಇಲ್ಲ ಎಂದು ಮುಂತಾಗಿ ಬುದ್ಧಿವಂತನು ಭ್ರಮೆಗೆ ಒಳಗಾಗುವುದಿಲ್ಲ.[2]

ಅಂದರೆ ಬಾಲ್ಯ, ಕೌಮಾರ, ಯೌವನ, ಮುಪ್ಪು ಮೊದಲಾದ ಅವಸ್ಥೆಗಳು – ದೇಹಕ್ಕೆ ಉಂಟಾಗುವಾಗಲೂ, ಅವೆಲ್ಲವುಗಳ ಹಿಂದೆ ಬದಲಾಗದ ಒಂದು ಚೇತನ (ಆತ್ಮ) ಇದ್ದೇ ಇರುವುದು ಸಹ ಎಲ್ಲರ ಅನುಭವಕ್ಕೆ ಬಂದಿದೆ.

---

1. ಯಾವಜ್ಜೀವೇತ್ ಸುಖಂ ಜೀವೇತ್ । ಋಣಂ ಕೃತ್ವಾ ಘೃತಂ ಪಿಬೇತ್ ।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ? (ಸರ್ವದರ್ಶನ ಸಂಗ್ರಹ)
2. ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ (ಗೀತಾ 2-13)

ಜ್ಞಾನ, ಅಜ್ಞಾನ, ಸುಖ, ದುಃಖ, ಮೊದಲಾದವುಗಳು ಎಂದೂ ಜಡವಾದ ದೇಹಕ್ಕೆ ಬರುವುದಿಲ್ಲ. ಕಣ್ಣು ಕೈ, ಕಾಲು, ಕಿವಿ ಮೊದಲಾದ ಅಂಗಗಳು ಊನವಾಗಿದ್ದರೂ ಅಂತಹವನನ್ನು 'ಶವ' ಎನ್ನುವುದಿಲ್ಲ. ಆದರೆ ಅವೆಲ್ಲ ಇದ್ದು ಒಳಗೆ ಚೇತನವಿಲ್ಲದಾಗ ಅದನ್ನು ಬರೀ 'ದೇಹ' ಎನ್ನುತ್ತಾರೆ. 'ಶವ' ಎನ್ನುತ್ತಾರೆ. ಎಂದರೆ ಶವ ದೇಹ ಮಾತ್ರ. ಒಳಗೆ ಚೇತನವಿರುವುದಿಲ್ಲ. ಅಂತ್ಯ ಸಂಸ್ಕಾರವನ್ನು ದೇಹಕ್ಕೆ ಎನ್ನುವರೇ ಹೊರತು ಜೀವಕ್ಕೆ ಅಲ್ಲ. ದೇಹವೇ ಜೀವವಾಗಿದ್ದ ಪಕ್ಷದಲ್ಲಿ ಮೃತದೇಹವನ್ನು ಯಾರೂ ಸುಡುತ್ತಲೇ ಇರಲಿಲ್ಲ.

ಹಳೆಯ ಬಟ್ಟೆಗಳನ್ನು ಬಿಟ್ಟು ಮನುಷ್ಯನು ಹೊಸ ಬಟ್ಟೆಗಳನ್ನು ಧರಿಸುವಂತೆ ಆತ್ಮನು (ಜೀವನು) ಮುದಿ ಶರೀರವನ್ನು ತೊರೆದು ಹೊಸ ಶರೀರ ಪಡೆಯುತ್ತಾನೆ.[3]

ಈ ಎಲ್ಲ ಕಾರಣಗಳಿಂದ ದೇಹಾತಿರಿಕ್ತನಾದ ''ಜೀವ''ನಿದ್ದಾನೆ ಎಂಬುದು ಸಿದ್ಧವಾಗುತ್ತದೆ.



3. ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋ ಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ (ಗೀತಾ 2-22)

# ಜೀವ - ಒಂದು ಪರಿಚಯ

''ಜೀವ'' ಎಂದರೆ ಯಾರು?

''ಜೀವ್''ನ ಸ್ವರೂಪವನ್ನು ಶ್ರೀಮದ್ ಭಾಗವತದಲ್ಲಿ ಹೀಗೆ ವರ್ಣಿಸಿದ್ದಾರೆ. ಪರಮಾತ್ಮನಿಗಿಂತ ಭಿನ್ನನು, ಸೂಕ್ಷ್ಮನು, ಅಭಿವ್ಯಕ್ತವಾಗದ ಜ್ಞಾನಾನಂದಾದಿ ಗುಣಗಳುಳ್ಳವನು. 'ವಸ್ತು' ಶಬ್ದವಾಚ್ಯನಾದ ಪರಮಾತ್ಮನನ್ನು ನೋಡದಿರುವ ಕಾರಣ ದಿಂದಾಗಿ ಹಾಗೂ ಅವನ ಬಗೆಗೆ ಶ್ರವಣಾದಿಗಳನ್ನು ಮಾಡದ ಕಾರಣ ಮತ್ತೆ ಮತ್ತೆ ಜನನ ಮರಣಗಳ ಚಕ್ರಗಳಿಗೆ ಸಿಲುಕಿರುವವನೇ ''ಜೀವನು.''[1]

ಲಿಂಗಶರೀರದ ಒಳಗಿರುವವನು 'ನಾನು' ಎಂಬ ಜ್ಞಾನಕ್ಕೆ ವಿಷಯನಾದವನು ಆತ್ಮ. ಈ ಲಿಂಗಶರೀರವು ಸ್ಥೂಲವಾಗಿ ಒಂದು. ಪ್ರಾಣ, ಇಂದ್ರಿಯ, ಅಂತಃಕರಣ ಭೇದದಿಂದ 'ತ್ರಿವೃತ್' ಎನ್ನುತ್ತಾರೆ. ಐದರ ಮೂರರಿಂದ ಅಂದರೆ, ಪಂಚ ಜ್ಞಾನೇಂದ್ರಿಯ + ಪಂಚಕರ್ಮೇಂದ್ರಿಯ + ಪಂಚ ಪ್ರಾಣಗಳು ಹಾಗೂ ಮನಸ್ಸು ಹೀಗೆ 16 ವಸ್ತುಗಳಿಂದ ಕೂಡಿದ ಈ ಲಿಂಗಶರೀರದ ಒಳಗೆ ಇರುವ ಜ್ಞಾನಾನಂದಾತ್ಮಕ ಚೈತನ್ಯವೇ 'ಜೀವ' ಎನಿಸಿದೆ.[2]

''ನಾನು'' ಎಂದು ಯಾವನು ತಿಳಿಯುವನೋ ಅವನೇ ''ಜೀವ''ನು ಎಂದು ಹೇಳಲ್ಪಡುತ್ತಾನೆ. ಅವನೇ ದುಃಖಿಯು, ಅವನೇ ಸುಖಿಯು, ಅವನೇ ಬಂಧಮೋಕ್ಷಗಳಿಗೆ ಪಾತ್ರನಾಗಿದ್ದಾನೆ ಎಂಬುದಾಗಿ ಪರಮಶ್ರುತಿಯಲ್ಲಿ ಹೇಳಿದೆ.[3]

ಸರ್ವಾವಯವಗಳಿಂದ ಸಹಿತವಾದ ಈ ದೇಹವು ಇರುವಾಗಲೂ, ಯಾವನು ದೇಹದಿಂದ ಹೊರಗೆ ಹೋಗುತ್ತಿರಲು, ಆ ದೇಹವನ್ನು, ಜನರು ಮೃತ ಶರೀರವೆಂದು ವ್ಯವಹರಿಸುವರೋ ಅವನೇ ''ಜೀವನು'' - ದೇಹದಿಂದ ಭಿನ್ನನು ಎಂಬುದಾಗಿ

---

1. ಅತಃ ಪರಂ ಯದವ್ಯಕ್ತಮವ್ಯೂಢ ಗುಣಬೃಂಹಿತಮ್ ।
ಅದೃಷ್ಟ ಅಶ್ರುತ ವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ ॥
ಶ್ರೀಮದ್ ಭಾಗವತ (1-3-32)

2. ಏಕಂ ಪಂಚವಿಧಂ ಲಿಂಗಂ ತ್ರಿವೃತ್ ಷೋಡಶವಿಸ್ತರಮ್ ।
ಏಷ ಚೇತನಯಾ ಯುಕ್ತಃ ಜೀವ ಇತ್ಯಭಿಧೀಯತೇ ॥ ಶ್ರೀಮದ್‌ಭಾಗವತ (4- 29-76)

3. ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ ।
ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥ ಪರಮಶ್ರುತಿಃ

ಶ್ರೀವಿಷ್ಣುರಹಸ್ಯದಲ್ಲಿ ತಿಳಿಸಿದ್ದಾರೆ.[4] (ಜೀವನು ತನ್ನ ಇಚ್ಛೆಯಂತೆ ಆ ದೇಹದಲ್ಲಿ ನಿಲ್ಲಲು ಸಮರ್ಥನಲ್ಲ. ಆದ್ದರಿಂದ ಜೀವನು ಪರತಂತ್ರನೇ ಸರಿ)

**ಜೀವನ ಪರಿಮಾಣ**

ಜೀವನು ಅಣುವಾಗಿದ್ದಾನೆ.[5] ಬ್ರಹ್ಮಾದಿ ಸಕಲ ಜೀವರ ಪರಿಮಾಣ ಒಂದೇ ರೀತಿಯಾಗಿ ಇರುತ್ತದೆ.

ಒಂದು ಪರಮಾಣುಪ್ರದೇಶದಲ್ಲಿ ಅನಂತ ಜೀವರಾಶಿಗಳಿರುವವು ಎಂದಾಗಿ ಹೇಳುತ್ತ ಜೀವನ ಪರಿಮಾಣ ಅತ್ಯಂತ ಅಣು ಎಂಬುದಾಗಿ ಶ್ರೀಮದಾಚಾರ್ಯರು ಶ್ರೀವಿಷ್ಣುತತ್ವನಿರ್ಣಯ ಗ್ರಂಥದಲ್ಲಿ ತಿಳಿಸಿರುತ್ತಾರೆ.[6]

ಬ್ರಹ್ಮ ವಾಯುಗಳನ್ನು ಮೊದಲು ಮಾಡಿ ಸಕಲ ಜೀವರ ಪರಿಮಾಣ ಒಂದೇ ಆಗಿದ್ದರೂ ಅವರ ಯೋಗ್ಯತೆ ಒಂದೇ ತೆರನಾಗಿಲ್ಲ. ಯೋಗ್ಯತೆಯಲ್ಲಿ ತಾರತಮ್ಯ ಇದ್ದೇ ಇದೆ.

ಕುದುರೆ ಬಾಲದ ಕೊನೆಯ ತುದಿಯನ್ನು ನೂರು ಭಾಗಮಾಡಿ, ಅದರಲ್ಲಿ ಒಂದು ಭಾಗವನ್ನು ಮತ್ತೆ ನೂರು ಭಾಗಮಾಡಿದರೆ (100×100=10,000) ಎಷ್ಟಿರುವುದೋ, ಅದು ಜೀವನ ಪರಿಮಾಣಕ್ಕೆ ಸರಿಹೋಗುತ್ತದೆ.[7]

"ಅತ್ಯಣುಜೀವವಿದೆ ಅನಾದಿಯಿಂದಲಿ" ಎಂಬ ಶ್ರೀ ವಿಜಯದಾಸರ ಸುಳಾದಿಯನ್ನು ಇಲ್ಲಿ ಸ್ಮರಿಸಬಹುದು.

ಶ್ರೀ ಜಗನ್ನಾಥದಾಸರು ತಮ್ಮ ಶ್ರೀಹರಿಕಥಾಮೃತಸಾರಗ್ರಂಥದಲ್ಲಿ ಹೀಗೆ ತಿಳಿಸಿದ್ದಾರೆ.

**ಕುದುರೆ ಬಾಲದ ಕೊನೆಯ ಕೂದಲು**
**ತುದಿವಿಭಾಗವ ಮಾಡಿ ಶತವಿಧ**

---

4. ದೇಹೇ ಸಾವಯವೇ ತಿಷ್ಠತ್ಯಪಿ ಯಸ್ಮಿನ್ ಗತೇ ಮೃತಃ ।
ಇತಿ ವ್ಯವಹೃತಿರ್ಲೋಕೇ ಸ ಜೀವೋ ದೇಹತಃ ಪರಃ ॥ ವಿಷ್ಣುರಹಸ್ಯ (36 -44)
5. ಓಂ ಅಣವಶ್ಚ ಓಂ (2-4-8) ಹಾಗೂ "ಅಣುಹ್ಯೇವೈಷ ಪುರುಷಃ ಭವತಿ"
ಇತಿ ಶಾಂಡಿಲ್ಯ ಶ್ರುತಿಃ ॥
6. ಪರಮಾಣು ಪ್ರದೇಶೇಽಪಿ ಹ್ಯನಂತಾ ಪ್ರಾಣಿ(ಜೀವ)ರಾಶಯಃ ॥ಶ್ರೀವಿಷ್ಣುತತ್ವವಿನಿರ್ಣಯ
7. ವಾಲಾಗ್ರ ಶತಭಾಗಸ್ಯ ಶತಧಾ ಭಿದ್ಯತಶ್ಚಯಃ ।
ಭಾಗೋ ಜೀವಃ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ ॥ ಶ್ವೇತಾಶ್ವತರೋಪನಿಷತ್

**ವದರೊಳೊಂದನು ನೂರು ಭಾಗವ ಮಾಡಲೆಂತಿಹುದೋ ।**
**ವಿಧಿಭವಾದಿ ಸಮಸ್ತ ದಿವಿಜರ**
**ಮೊದಲು ಮಾಡಿ ತೃಣಾಂತ ಜೀವರೊ**
**ಅಧಿಕ ನ್ಯೂನತೆಯಿಲ್ಲವೆಂದಿಗು ಜೀವ ಪರಿಮಾಣ ॥** ವರ್ಣಪ್ರಕ್ರಿಯಾ ಸಂಧಿ (9-7)

ಹಾಗೂ ಜೀವಾತ್ಮನು ಅಣು (ಅಣುರ್ಹ್ಯೇಷ ಆತ್ಮಾ) ಎಂಬುದಾಗಿ ಗೌಪವನ ಶ್ರುತಿಯಲ್ಲೂ ತಿಳಿಸಿದ್ದಾರೆ.

**ಜೀವನ ಸ್ವರೂಪ**

ಜೀವನು ಅಲ್ಪಶಕ್ತಿಯುಳ್ಳವ, ಸರ್ವಜ್ಞನಲ್ಲ, (ಎಲ್ಲವನ್ನೂ ತಿಳಿದವನಲ್ಲ) ಪರತಂತ್ರನು (ಇನ್ನೊಬ್ಬರ ಅಧೀನನು), ಅಪೂರ್ಣನು (ಯಾವ ವಿಷಯದಲ್ಲೂ ಪೂರ್ಣನಲ್ಲ), ಎಲ್ಲ ಕಾಲದಲ್ಲಿಯೂ ಇನ್ನೊಬ್ಬರನ್ನು ಆಶ್ರಯಿಸಿಕೊಂಡೇ ಇರುವವನು ಎಂಬುದಾಗಿ ಶ್ರೀವಿಷ್ಣುಪುರಾಣದಲ್ಲಿ ಹೇಳಿದ್ದಾರೆ.[8]

ಜೀವನು ಅಲ್ಪಶಕ್ತಿಯುಳ್ಳವನು, ಅಸ್ವತಂತ್ರನು, (ಭಗವಂತನ ಅಧೀನನು), ಅವರನು ಅಂದರೆ ಕನಿಷ್ಠನು ಎಂಬುದಾಗಿ ಭಾಲ್ಲವೇಯ ಶ್ರುತಿಯಲ್ಲಿ ತಿಳಿಸಲಾಗಿದೆ.[9]

ಯಾವನು ಕರ್ಮಫಲವನ್ನು ಉಣ್ಣುವನೋ, ನಿದ್ರಾದಿಗಳುಳ್ಳವನೋ, ದುಃಖ ಮತ್ತು ಮರಣಾದಿಗಳುಳ್ಳವನೋ ಅವನೇ ಜೀವನು.[10]

ದೇಹದಲ್ಲಿರುವ ಜೀವನು ನಿತ್ಯನೂ, ಅವಧ್ಯನೂ ಆಗಿದ್ದಾನೆ.[11]

ಆ ಭಗವಂತನು ಎಲ್ಲಿಯವರೆಗೆ ಅನಾದಿ ಅನಂತ ಕಾಲಿಕವಾಗಿ ಇರುವನೋ ಅದೇ ರೀತಿಯಾಗಿ ಜೀವನೂ ನಿತ್ಯನು. ಪೃಥಿವ್ಯಾದಿ ಧಾತುಗಳು ಅನಿತ್ಯವಾಗಿವೆ. ಏಕೆಂದರೆ ಅನಾದಿನಿತ್ಯನಾದ ಜೀವನು ಹುಟ್ಟುತ್ತಾನೆ, ಸಾಯುತ್ತಾನೆ, ಕರ್ಮಗಳನ್ನು ಅನುಭವಿಸುತ್ತಾನೆ. ಭಗವಂತನ ಅನುಗ್ರಹದಿಂದ ಮುಕ್ತನಾಗುತ್ತಾನೆ ಎಂಬುದಾಗಿ ಬ್ರಹ್ಮಸೂತ್ರಗಳ ಯಾವದಧಿಕರಣದಲ್ಲಿ ತಿಳಿಸಿರುತ್ತಾರೆ.[12]

---

8. ಅಲ್ಪಶಕ್ತಿರಸಾರ್ವಜ್ಞಂ ಪಾರತಂತ್ರ್ಯಮಪೂರ್ಣತಾ ।
ಉಪಜೀವಕತ್ವಂ ಜೀವತ್ವಂ ॥ — ಶ್ರೀವಿಷ್ಣುಪುರಾಣ
9. ಜೀವೋಽಲ್ಪಶಕ್ತಿರಸ್ವತಂತ್ರೋಽವರಃ ॥ — ಭಾಲ್ಲವೇಯ ಶ್ರುತಿಃ
10. ಯಃ ಕರ್ಮಫಲಭೋಕ್ತಾ ಸುಪ್ತ್ಯಾದಿಮಾನ್ ಸ ಜೀವಃ ॥ — ಕಾಠಕೋಪನಿಷತ್ ಭಾಷ್ಯ
11. ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ॥ — ಭಗವದ್ಗೀತಾ (2-30)
12. ಓಂ ಯಾವದಾತ್ಮ ಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ॥ — (2-3-30)
"ನಿತ್ಯಃ ಪರೋ ನಿತ್ಯೋ ಜೀವೋಽನಿತ್ಯಾಸ್ತಸ್ಯ ಧಾತವಃ ।
ಅತ ಉತ್ಪದ್ಯತೇ ಚ ಮ್ರಿಯತೇ ಚ ವಿಮುಚ್ಯತೇ ಚ ॥" — ಆಗ್ನಿವೇಶ್ಯಶ್ರುತಿಃ

ಜೀವನು ನಿತ್ಯ. ಭೋಗ್ಯವಾದ ಸುಖದುಃಖಗಳು ಹಾಗೂ ಪೃಥಿವ್ಯಾದಿ ಧಾತುಗಳಿಂದ ತಯಾರಾದ ದೇಹಗಳು ಅನಿತ್ಯವೆಂದು ಶ್ರೀಮನ್‌ಮಹಾಭಾರತದಲ್ಲಿ ಹೇಳಿದೆ.[13]

''ಜೀವ' ಶಬ್ದದ ಅರ್ಥವನ್ನು ಕಿಂಚಿತ್ತಾಗಿ ತಿಳಿಯಲು ಪ್ರಯತ್ನಿಸೋಣ-

''ಜೀವ' ಪ್ರಾಣಧಾರಣೇ ಧಾತುವಿನಿಂದ ''ಜೀವ' ಶಬ್ದ ರೂಢಿಯಲ್ಲಿ ಬಂದಿದೆ. ನಮ್ಮ ದೇಹದಲ್ಲಿ ಮುಖ್ಯವಾಗಿ ಪ್ರಾಣಧಾರಣೆಯ ಕೆಲಸವನ್ನು ಮಾಡುವವ ಭಗವಂತನೇ. ಅವನಿದ್ದರೆ ಈ ದೇಹ ಉಸಿರಾಡುತ್ತದೆ. ಅವನು ಹೊರಗೆ ಹೋದರೆ ದೇಹ ಬೀಳುತ್ತದೆ. ಆದ್ದರಿಂದ ಈ ''ಜೀವ' ಎಂಬ ಹೆಸರು ಮುಖ್ಯಾರ್ಥದಲ್ಲಿ ಭಗವಂತನಿಗೆ ಸಲ್ಲುತ್ತದೆಂದು ತಿಳಿಯಬೇಕು.[14]

ಅಮುಖ್ಯಾರ್ಥದಲ್ಲಿ ಸಂಸಾರಿಗಳು 'ಜೀವ'ರೆಂದು ಕರೆಸಿಕೊಳ್ಳುತ್ತಾರೆ. ಹುಟ್ಟುಸಾವುಗಳು ಇರುವುದರಿಂದ ಇವರು 'ಜೀ' ಎನಿಸಿದರೆ, ಉಚ್ಚ ನೀಚ ಗತಿಗೆ ಅಲೆದಾಡುವುದರಿಂದ 'ವ' ಎನಿಸಿದ್ದಾರೆ.[15]

ಹೀಗೆ 'ಜೀವ' ಶಬ್ದವು ಪ್ರಧಾನವಾಗಿ ಭಗವಂತನಿಗೆ ಅಪ್ರಧಾನವಾಗಿ ಚೇತನರಿಗೆ ಸಲ್ಲುವದೆಂದು ತಿಳಿಯುವದು ಅವಶ್ಯ.



---

13. ಆತ್ಮಾನಿತ್ಯಃ ಸುಖದುಃಖೇತ್ವನಿತ್ಯೇ ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ ॥ ಶ್ರೀಮನ್ ಮಹಾಭಾರತ.
14. ಪ್ರಾಣಾಧಾರೋ ಹರಿರ್ನಾನ್ಯಃ ಜೀವಶಬ್ದಸ್ತತೋ ಹರೌ ॥ (ಛಾಂದೋಗ್ಯ 6-2-2)
15. ಸಂಸಾರಿಣಾಂ ಜೀವತಾ ತು ಜನನಾದ್ ವಾನತೇಸ್ತಥಾ ॥ (ಛಾಂದೋಗ್ಯ 6-2-2)

# ಜೀವನು ಭೂಲೋಕಕ್ಕೆ ಬರುವ ಕ್ರಮ
## (ಜೀವ ಹೋಮ)

ಕಾಮ್ಯಕರ್ಮಗಳಲ್ಲಿ ವೈರಾಗ್ಯ ಬರುವುದಕ್ಕಾಗಿ ಜೀವನು ಪರಲೋಕದಿಂದ ಈ ಲೋಕಕ್ಕೆ ಬರುವ ಕ್ರಮವನ್ನು ತಿಳಿಯುವದು ಅವಶ್ಯವಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರವಾಹಣರಾಜ ಮತ್ತು ಗೌತಮರ ಸಂವಾದ ರೂಪದಲ್ಲಿ ಇದನ್ನು ತಿಳಿಸಿ ಕೊಟ್ಟಿದ್ದಾರೆ.

ಪ್ರಾಣದೇವರಲ್ಲಿ ಪ್ರಕಾಶರೂಪವಾದ ಭಗವಂತನ ನಾರಾಯಣರೂಪವಿದೆ. ಇದು ದ್ಯುಲೋಕದಲ್ಲಿರುವ ಪರಮಾತ್ಮನ ಸ್ವರೂಪ. ಈ ರೂಪವು ವಿಶ್ವಸಂಹಾರಕವಾದುದರಿಂದಲೂ ಎಲ್ಲಾ ಅಂಗಗಳಿಗೆ ಪ್ರೇರಕವಾದುದರಿಂದಲೂ ಇದಕ್ಕೆ 'ಅಗ್ನಿ' ಎಂದು ಹೆಸರು. ದ್ಯುಲೋಕದಲ್ಲಿರುವ ಈ ನಾರಾಯಣ ಸ್ವರೂಪಕ್ಕೆ ಪುನಃ ಪ್ರತ್ಯೇಕ ಐದು ರೂಪಗಳಿವೆ. ನಾರಾಯಣ ನಾರಾಯಣ, ನಾರಾಯಣ-ವಾಸುದೇವ, ನಾರಾಯಣ ಸಂಕರ್ಷಣ, ನಾರಾಯಣ ಪ್ರದ್ಯುಮ್ನ, ಹಾಗೂ ನಾರಾಯಣ -ಅನಿರುದ್ಧ ಎಂದು ಈ ರೂಪಗಳ ಹೆಸರು. ನಾರಾಯಣ ನಾರಾಯಣ ರೂಪವು ಆದಿತ್ಯನಲ್ಲಿದೆ- (ಆದಾನಾತ್ ಆದಿತ್ಯಃ) ಪ್ರಾಣಿಗಳ ಆಯುಷ್ಯವನ್ನು ತೆಗೆಯುವದರಿಂದ ಈ ಸ್ವರೂಪಕ್ಕೆ ಆದಿತ್ಯ ಎಂಬ ಹೆಸರೂ ಇದೆ. ದ್ಯುಲೋಕದಲ್ಲಿರುವ ಅಗ್ನಿಯಾದ ನಾರಾಯಣ ರೂಪಕ್ಕೆ ಈ ನಾರಾಯಣ-ನಾರಾಯಣ ಸಮಿಧೆಯಂತಿದೆ. (ಸಮೇಧನಾತ್ ಸಮಿಧ್) ಗುಣಾದಿ ಪರಿಪೂರ್ಣತೆಯನ್ನು ಹೊಂದಿ ಸರ್ವೋತ್ತಮನಾಗಿರುವ ಕಾರಣ ಸಮಿತ್ ಎನಿಸಿದೆ. ಈ ನಾರಾಯಣ ಎಂಬ ಅಗ್ನಿಗೂ ನಾರಾಯಣ -ವಾಸುದೇವ ಎಂಬ ಭಗವದ್ರೂಪವೇ ಧೂಮ. ಇದು ಸೂರ್ಯನ ರಶ್ಮಿಗಳಲ್ಲಿದೆ. (ರತಿ ಶಂ ರೂಪತ್ವೇನ ರಶ್ಮಿನಾಮಾ) ತೃಪ್ತಿ ಹಾಗೂ ಸುಖ ಸ್ವರೂಪವಾದ ಕಾರಣ ಈ ರೂಪಕ್ಕೆ ರಶ್ಮಿ ಎಂದು ಹೆಸರು. (ಧೂತ್ ಕರೋತಿ-ನಿರಾಕರೋತಿ-ಅಜ್ಞಾನಾದೀನ್ ಇತಿ ಧೂಮಃ) ತನ್ನ ಭಕ್ತರಲ್ಲಿರುವ ಅಜ್ಞಾನಾದಿ ದೋಷಗಳನ್ನು ದೂರಗೊಳಿಸುವ ಕಾರಣ ಈ ನಾರಾಯಣ ವಾಸುದೇವ ಸ್ವರೂಪವು ಧೂಮವೆಂದು ಅನ್ವರ್ಥಕವಾಗಿ ಕರೆಸಿಕೊಳ್ಳುತ್ತಿದೆ. ಈ ನಾರಾಯಣ ಎಂಬ ಅಗ್ನಿಗೆ ನಾರಾಯಣ ಸಂಕರ್ಷಣವೆಂಬ ಭಗವತ್ ಸ್ವರೂಪವೇ ಅರ್ಚಿ. ಜ್ವಾಲ ಇದು ಅಹಃ (ಹಗಲು ಎಂಬ ಕಾಲದಲ್ಲಿದೆ, ಅಜ್ಞಾನದಿಂದ ದೂಷಿತವಾಗದಿರುವುದರಿಂದ (ತಮಸಾ ಅಹನನೀಯತ್ವಾತ್ ಅಹರ್ನಾಮಾ) ಅಹಃ ಎಂಬ ಹೆಸರು ಈ ನಾರಾಯಣ ಸಂಕರ್ಷಣ ಸ್ವರೂಪಕ್ಕಿದೆ. ಎಲ್ಲರಿಂದಲೂ ಚೆನ್ನಾಗಿ ಪೂಜಿಸಲ್ಪಡುವ ಕಾರಣ ಅರ್ಚಿ ಎಂದೂ ಸಾರ್ಥಕನಾಮವಿದೆ. (ಅರಂಚಿತತ್ವಾತ್ ಅಲಂ ಚಿತತ್ವಾತ್ ಅರ್ಚಿಃ) ಈ

ನಾರಾಯಣ ಎಂಬ ಅಗ್ನಿಗೆ ನಾರಾಯಣ ಪ್ರದ್ಯುಮ್ನ ರೂಪವೇ ಅಂಗಾರ. ಈ ರೂಪವು ಚಂದ್ರನಲ್ಲಿದೆ. ಸುಖ ಸ್ವರೂಪವಾದ ಕಾರಣ (ಚಂದನಾತ್ ಸುಖ ಸ್ವರೂಪತ್ವಾತ್ ಚಂದ್ರನಾಮಾ) ಈ ಸ್ವರೂಪಕ್ಕೆ ಚಂದ್ರ ಎಂದೂ ಹೆಸರಿದೆ. ಪ್ರಾಣಿಗಳ ಎಲ್ಲಾ ಅಂಗಗಳಲ್ಲಿದ್ದು ಕ್ರೀಡಿಸುತ್ತಿರುವ ಕಾರಣ (ಅಂಗೇಷು ರತೇಃ ಅಂಗಾರಃ) ಈ ನಾರಾಯಣ ಪ್ರದ್ಯುಮ್ನ ರೂಪಕ್ಕೆ ಅಂಗಾರ ಎಂಬ ಹೆಸರೂ ಅನ್ವರ್ಥಕ. ಈ ನಾರಾಯಣನೆಂಬ ದ್ಯುಲೋಕಾಗ್ನಿಗೆ ನಾರಾಯಣ ಅನಿರುದ್ಧ ರೂಪವೇ ವಿಷ್ಫುಲಿಂಗ. ಈ ಸ್ವರೂಪವು ನಕ್ಷತ್ರಗಳಲ್ಲಿದೆ. ತನಗೆ ನಿಯಾಮಕನಾಗಿ ಬೇರೆ ಕ್ಷತ್ರಿಯನು ಇಲ್ಲದಿರುವ ಕಾರಣ – (ಅನನ್ಯ ರಾಜತ್ವೇನ ನಕ್ಷತ್ರನಾಮಾ) ಈ ಭಗವತ್ ಸ್ವರೂಪಕ್ಕೆ ನಕ್ಷತ್ರ ಎಂಬ ಹೆಸರೂ ಇದೆ, ಮತ್ಸ್ಯಾದಿ ಅನೇಕ ಸ್ವರೂಪಗಳಿಂದ ಶೋಭಿಸುವ ಕಾರಣ- (ಮತ್ಸ್ಯಾದಿ ರೂಪೇಣ ವಿವಿಧಂ ಸ್ಫುರಣಾತ್) ವಿಷ್ಫುಲಿಂಗ ಎಂಬ ಅನ್ವರ್ಥಕ ನಾಮವೂ ಇದೆ.

ಸ್ವರ್ಗಲೋಕದಲ್ಲಿರುವ ನಾರಾಯಣರೂಪವಾದ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯಿಂದ ಜೀವನನ್ನು ಆಹುತಿಯಂತೆ ಒಪ್ಪಿಸುತ್ತಾರೆ. ಆಗ ಜೀವನು ಪೃಥಿವೀ, ಜಲ, ತೇಜಸ್ಸು, ವಾಯು ಹಾಗೂ ಆಕಾಶಗಳೆಂಬ ಪಂಚಮಹಾಭೂತಗಳಿಂದ ಕೂಡಿರುತ್ತಾನೆ. ಹೀಗೆ ಆಹುತಿಯಾಗಿ ಅರ್ಪಿಸಲ್ಪಟ್ಟ ಜೀವನನ್ನು, ಅವನ ಸ್ವರ್ಗ ಸುಖದ ಪುಣ್ಯ ತೀರಿದ ಮೇಲೆ ಪುನಃ ಭೂಲೋಕಕ್ಕೆ ಹಿಂದಿರುಗಿಸಲು ದೇವತೆಗಳು ನಾರಾಯಣ ಎಂಬ ಆಹುತಿ ಸ್ಥಾನದಿಂದ ಚಂದ್ರ ಲೋಕಕ್ಕೆ ಕಳಿಸಿಕೊಡುತ್ತಾರೆ.[1]

ಪರ್ಜನ್ಯ(ಮೇಘ)ದಲ್ಲಿರುವ ವಾಸುದೇವ ಎಂಬ ಭಗವತ್ ಸ್ವರೂಪವೂ ಒಂದು ಅಗ್ನಿ. ಬ್ರಹ್ಮಾದಿ ಉತ್ತಮ ಜೀವರು ಹಾಗೂ ಇತರ ಎಲ್ಲಾ ಜಗತ್ತು ಈ ಭಗವತ್ ಸ್ವರೂಪದ ಸೃಷ್ಟಿಯಾದ ಕಾರಣ (ಪರಂ ಅಸ್ಯ ಜನ್ಯಂ ಇತಿ ಪರ್ಜನ್ಯನಾಮ) ಅದಕ್ಕೆಪರ್ಜನ್ಯ ಎಂದೂ ಹೆಸರಿದೆ. ಈ ಪರ್ಜನ್ಯಾಗ್ನಿಗೆ ನಾರಾಯಣವಾಸುದೇವ ಎಂಬ ಭಗವತ್ ಸ್ವರೂಪವೇ ಸಮಿಧೆ. ಈ ರೂಪವು ವಾಯುವಿನಲ್ಲಿದೆ. ಜ್ಞಾನಸ್ವರೂಪನಾಗಿದ್ದು ಆಯುಷ್ಯವನ್ನು ಅನುಗ್ರಹಿಸುವ ಕಾರಣ ಈ ರೂಪಕ್ಕೆ (ಜ್ಞಾನಾಯು ರೂಪತಃ ವಾಯುಃ) ವಾಯು ಎಂಬ ಹೆಸರಿದೆ. ಈ ವಾಸುದೇವ ಎಂಬ ಅಗ್ನಿಗೆ ವಾಸುದೇವ ವಾಸುದೇವ ಎಂಬ ಭಗವತ್ ಸ್ವರೂಪವೇ ಧೂಮ. ಈ ರೂಪವು (ಅಭ್ರ) ಮೋಡದಲ್ಲಿದೆ. ನೀರಿಗೆ ಆಧಾರವಾಗಿರುವುದರಿಂದ (ಅಪಾಂ ಭರಣಾತ್ ಅಭ್ರನಾಮಾ) ಈ ರೂಪಕ್ಕೆ ಅಭ್ರ ಎಂಬ ಹೆಸರೂ ಇದೆ. ವಾಸುದೇವ ಸಂಕರ್ಷಣನೆಂಬ ಭಗವತ್ ಸ್ವರೂಪವು

1. ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ।
ತಸ್ಯಾಃ ಆಹುತೇಃ ಸೋಮೋ ರಾಜಾ ಸಂಭವತಿ ॥ ಛಾಂದೋಗ್ಯ ಉಪನಿಷತ್.

ಪರ್ಜನ್ಯಾಗ್ನಿಯ (ಅರ್ಚಿ) ಜ್ವಾಲೆ. ಈ ರೂಪವು (ವಿದ್ಯುತ್) ಮಿಂಚಿನಲ್ಲಿದೆ. ಜಗತ್ತಿಗೆ ಪ್ರಕಾಶಕವಾದ ಕಾರಣ ಈ ಸ್ವರೂಪಕ್ಕೆ ವಿದ್ಯುತ್ ಎಂಬ ಹೆಸರೂ ಇದೆ. (ವಿದ್ಯೋತನಾತ್ ವಿದ್ಯುನ್ನಾಮಾ.) ವಾಸುದೇವ ಪ್ರದ್ಯುಮ್ನನೆಂಬ ಭಗವತ್ ಸ್ವರೂಪವು ಈ ಪರ್ಜನ್ಯಾಗ್ನಿಯ ಅಂಗಾರ, ಕೆಂಡ. ಈ ಸ್ವರೂಪವು ಅಶನಿ (ಸಿಡಿಲು)ಯಲ್ಲಿದೆ. ಪ್ರಳಯ ಕಾಲದಲ್ಲಿ ಎಲ್ಲವನ್ನೂ ಭಕ್ಷಿಸುವ ಕಾರಣ ಇದಕ್ಕೆ ಅಶನಿ ಎಂಬ ಹೆಸರೂ ಇದೆ. (ಅಶನಾತ್ – ಅಶನಿನಾಮಾ) ವಾಸುದೇವ ಅನಿರುದ್ಧನೆಂಬ ಭಗವತ್ ಸ್ವರೂಪವು ಪರ್ಜನ್ಯಾಗ್ನಿಯ ವಿಷ್ಫುಲಿಂಗ, ಕಿಡಿ. ಈ ಸ್ವರೂಪವು ಹ್ರಾದುನಿ, ಮೇಘದ ಗರ್ಜನೆಯಲ್ಲಿದೆ. ಪರಿಪೂರ್ಣಾನಂದ ಸ್ವರೂಪವಾದುದರಿಂದ (ಹ್ರಾದನಾತ್ ಹ್ರಾದುನಿನಾಮಾ) ಹ್ರಾದುನಿ ಎಂಬ ಹೆಸರು ಈ ಸ್ವರೂಪಕ್ಕಿದೆ. ವಾಸುದೇವ ನಾರಾಯಣನೇ ಮೊದಲಾದ ಐದು ಭಗವತ್ ಸ್ವರೂಪಗಳು, ಹಿಂದೆ ವಿವರಿಸಿದಂತೆ ಸಮಿತ್, ಧೂಮ, ಅರ್ಚಿ, ಅಂಗಾರ ಹಾಗೂ ವಿಷ್ಫುಲಿಂಗ ಎಂದು ಅನ್ವರ್ಥವಾಗಿ ವ್ಯವಹರಿಸಲ್ಪಟ್ಟಿವೆ.[2]

ವಾಸುದೇವರೂಪವಾದ ಈ ಪರ್ಜನ್ಯಾಗ್ನಿಯಲ್ಲಿ, ದೇವತೆಗಳು ಚಂದ್ರಲೋಕ ದಲ್ಲಿರುವ ಜೀವನನ್ನು ಆಹುತಿಯಾಗಿ ಸಮರ್ಪಿಸುತ್ತಾರೆ. ಹೀಗೆ ಪರ್ಜನ್ಯಾಗ್ನಿಯೆಂಬ ಆಹುತಿಸ್ಥಾನಕ್ಕೆ ಬಂದ ಜೀವನನ್ನು ಆ ಆಹುತಿ ಸ್ಥಾನದಿಂದ ದೇವತೆಗಳು ಪರ್ಜನ್ಯದಿಂದ ಸುರಿಯುವ ಮಳೆಯ ನೀರಿನಲ್ಲಿ ಸೇರಿಸುತ್ತಾರೆ,[3]

ಪೃಥಿವಿಯಲ್ಲಿ ಭಗವಂತನ ಸಂಕರ್ಷಣ ರೂಪವಿದೆ. ಲೋಕ ಪ್ರಸಿದ್ಧವಾದ ಕಾರಣ ಈ ರೂಪಕ್ಕೆ ಪೃಥಿವೀ ಎಂದು ಹೆಸರು. (ಪ್ರಥಿತತ್ವಾತ್ ಪೃಥೀವೀನಾಮಾ). ಈ ರೂಪವೂ ಒಂದು ಅಗ್ನಿ. ಈ ಅಗ್ನಿಗೆ ಸಂಕರ್ಷಣ ನಾರಾಯಣನೆಂಬ ಭಗವತ್‌ಸ್ವರೂಪವೇ ಸಮಿಧೆ. ಇದು ಸಂವತ್ಸರದಲ್ಲಿದೆ. ಜಗತ್ತಿಗೆ ಚೆನ್ನಾಗಿ ಆಶ್ರಯವನ್ನು ಕೊಟ್ಟು ಆನಂದಿಸುವುದರಿಂದ ಈ ರೂಪಕ್ಕೆ ಸಂವತ್ಸರ ಎಂಬ ಹೆಸರೂ ಇದೆ. (ಸಂವಾಸಯತಿ ರಮತೆ ಚೇತಿ ಸಂವತ್ಸರನಾಮಾ) ಸಂಕರ್ಷಣ ವಾಸುದೇವನೆಂಬ ಭಗವತ್‌ಸ್ವರೂಪವು ಈ ಅಗ್ನಿಯ ಧೂಮ. ಇದು ಚೆನ್ನಾಗಿ ಪ್ರಕಾಶಿಸುವ ಕಾರಣ 'ಆಕಾಶ' ಎಂಬ ಹೆಸರುಳ್ಳದ್ದಾಗಿ (ಆ ಸಮಂತಾತ್ ಕಾಶನಾತ್ ಆಕಾಶನಾಮಾ) ಆಕಾಶದಲ್ಲಿದೆ. ಸಂಕರ್ಷಣ –ಸಂಕರ್ಷಣನೆಂಬ ಭಗವತ್‌ಸ್ವರೂಪವು ಈ ಅಗ್ನಿಯ ಅರ್ಚಿ. ಇದು ರಾತ್ರಿಯಲ್ಲಿದ್ದು ಭಕ್ತರಿಗೆ ಸುಖವನ್ನು ತಂದು ಕೊಡುವ ಕಾರಣ (ರತಿದಾನಾತ್ ರಾತ್ರಿನಾಮಾ) ರಾತ್ರಿ

2. ಪರ್ಜನ್ಯೋವಾವ ಗೌತಮಾಗ್ನಿಃ । ತಸ್ಯ ವಾಯುರೇವ ಸಮಿತ್। ಅಭ್ರಂ ಧೂಮಃ ।
ವಿದ್ಯುದರ್ಚಿಃ । ಅಶನಿರಂಗಾರಾಃ । ಹ್ರಾದುನಯೋ ವಿಷ್ಫುಲಿಂಗಾಃ ॥

3. ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ ।
ತಸ್ಯಾಃ ಆಹುತೇಃ ವರ್ಷಃ ಸಂಭವತಿ ॥

ಎಂಬ ಹೆಸರುಳ್ಳದ್ದು. ಸಂಕರ್ಷಣ ಪ್ರದ್ಯುಮ್ನ ಎಂಬ ಭಗವತ್‌ಸ್ವರೂಪವು ಈ ಅಗ್ನಿಯ ಅಂಗಾರ. ಈ ರೂಪವು ದಿಕ್ಕಗಳಲ್ಲಿದ್ದು ಪರತತ್ತ್ವವನ್ನು ಉಪದೇಶಿಸುವ ಕಾರಣ ದಿಕ್ ಎಂಬ ಹೆಸರುಳ್ಳದ್ದು ಆಗಿದೆ. (ದಿಶತೀತಿ ದಿಕ್). ಸಂಕರ್ಷಣ ಅನಿರುದ್ಧರೂಪವು ಈ ಅಗ್ನಿಯ ವಿಷ್ಫುಲಿಂಗ (ಕಿಡಿ). ಇದು ಅವಾಂತರದಿಕ್ಕು (ಉಪದಿಕ್ಕು)ಗಳಲ್ಲಿದ್ದು ಅಪರತತ್ತ್ವವನ್ನು ಉಪದೇಶಿಸುವದರಿಂದ ಅವಾಂತರ ದಿಕ್ (ಅವಾಂತರೇ ತತ್ತ್ವಂ ಉಪದಿಶತೀತಿ) ಎಂಬ ಹೆಸರುಳ್ಳದ್ದು.[4]

ಇಂತಹ ಸಂಕರ್ಷಣ ಸ್ವರೂಪವಾದ ಪೃಥಿವ್ಯಗ್ನಿಯಲ್ಲಿ ಮಳೆಯಲ್ಲಿ ಸೇರಿಕೊಂಡಿರುವ ಜೀವನನ್ನು ದೇವತೆಗಳು ಆಹುತಿಯ ರೂಪದಲ್ಲಿ ಅರ್ಪಿಸುತ್ತಾರೆ. ಬಳಿಕ ಈ ಆಹುತಿಯ ಸ್ಥಾನದಿಂದ ಜೀವನನ್ನು ದೇವತೆಗಳು, ಪ್ರಾಣಿಗಳು ತಿನ್ನುವ ಆಹಾರದಲ್ಲಿ ಸೇರಿಸುತ್ತಾರೆ.[5]

ಪುರುಷನಲ್ಲಿ ಭಗವಂತನ ಪ್ರದ್ಯುಮ್ನನೆಂಬ ರೂಪವಿದೆ. ಈ ರೂಪವು ಪೂರ್ಣವಾದ ಕಾರಣ ಪುರುಷ ಎಂಬ ಹೆಸರುಳ್ಳದ್ದಾಗಿದೆ. ಇದೂ ಅಗ್ನಿ. ಪ್ರದ್ಯುಮ್ನ ನಾರಾಯಣ ಎಂಬ ಭಗವತ್ ಸ್ವರೂಪವು ಈ ಅಗ್ನಿಗೆ ಸಮಿಧೆ. ಇದು ವಾಗಿಂದ್ರಿಯದಲ್ಲಿದ್ದು ಮಾತನಾಡುವ ಕಾರಣ "ವಾಕ್" ಎಂಬ ಹೆಸರುಳ್ಳದ್ದು. (ವಕ್ತೃತ್ವಾತ್ ವಾಕ್‌ನಾಮಾ). ಪ್ರದ್ಯುಮ್ನ ವಾಸುದೇವ ಎಂಬ ಭಗವತ್ ಸ್ವರೂಪವು ಈ ಅಗ್ನಿಯ ಧೂಮ. ಈ ರೂಪವು ಪ್ರಾಣನಲ್ಲಿದೆ. ಜಗತ್ತಿಗೆ ಪ್ರೇರಕವಾದ ಕಾರಣ ಪ್ರಾಣ ಎಂದೂ ಇದಕ್ಕೆ ಹೆಸರು. (ಪ್ರಾಣನಾತ್ ಪ್ರಾಣನಾಮಾ) ಪ್ರದ್ಯುಮ್ನ ಸಂಕರ್ಷಣ ಎಂಬ ಭಗವತ್ ಸ್ವರೂಪವು ಅರ್ಚಿ ಇದು ಜಿಹ್ವೆಯಲ್ಲಿದೆ. ಹೋಮಕ್ಕೆ ಆಧಾರವಾದ ಕಾರಣ ಇದು ಜಿಹ್ವಾ ಎಂದು ಕರೆಯಲ್ಪಡುತ್ತದೆ. (ಹೋಮತಃ ಜಿಹ್ವಾನಾಮಾ) ಪ್ರದ್ಯುಮ್ನ ಪ್ರದ್ಯುಮ್ನನೆಂಬ ಭಗವತ್ ಸ್ವರೂಪವು ಅಂಗಾರ. ಈ ರೂಪವು ಚಕ್ಷುರಿಂದ್ರಿಯದಲ್ಲಿದ್ದು ಎಲ್ಲವನ್ನೂ ಅಪರೋಕ್ಷವಾಗಿ ನೋಡುತ್ತಿರುವ ಕಾರಣ 'ಚಕ್ಷುಸ್' ಎಂಬ ಹೆಸರುಳ್ಳದ್ದು. (ಚಷ್ಟೇ ಪಶ್ಯತಿ ಸರ್ವಮಿತಿ ಚಕ್ಷುರ್ನಾಮಾ). ಪ್ರದ್ಯುಮ್ನ ಅನಿರುದ್ಧ ಎಂಬ ರೂಪವು ವಿಷ್ಫುಲಿಂಗ. ಇದು ಶ್ರೋತ್ರೇಂದ್ರಿಯದಲ್ಲಿದೆ. ಎಲ್ಲವನ್ನೂ ಕೇಳಿಸಿಕೊಳ್ಳುತ್ತಿರುವ ಕಾರಣ ಶ್ರೋತ್ರವೆಂದು ಇದರ ಹೆಸರು (ಶ್ರವಣಾತ್ ಶ್ರೋತ್ರಂ).[6]

---

4. ಪೃಥಿವೀ ವಾವ ಗೌತಮಾಗ್ನಿಃ । ತಸ್ಯಾಃ ಸಂವತ್ಸರ ಏವ ಸಮಿತ್ । ಆಕಾಶೋ ಧೂಮಃ । ರಾತ್ರಿರರ್ಚಿಃ । ದಿಶೋಽಂಗಾರಾಃ । ಅವಾಂತರದಿಶೋ ವಿಷ್ಫುಲಿಂಗಾಃ ॥
5. ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ವರ್ಷಂ ಜುಹ್ವತಿ । ತಸ್ಯಾಃ ಆಹುತೇಃ ಅನ್ನಂ ಸಂಭವತಿ ॥
6. ಪುರುಷೋ ವಾವ ಗೌತಮಾಗ್ನಿಃ । ತಸ್ಯ ವಾಗೇವ ಸಮಿತ್ । ಪ್ರಾಣೋ ಧೂಮಃ । ಜಿಹ್ವಾಽರ್ಚಿಃ । ಚಕ್ಷುರಂಗಾರಾಃ । ಶ್ರೋತ್ರಂ ವಿಷ್ಫುಲಿಂಗಾಃ ॥

ಈ ಪುರುಷಾಗ್ನಿಯಲ್ಲಿ ದೇವತೆಗಳು – ಅನ್ನದಲ್ಲಿ ಸೇರಿಕೊಂಡಿರುವ ಜೀವನನ್ನು ಹೋಮರೂಪದಿಂದ ಅರ್ಪಿಸುತ್ತಾರೆ. ಈ ಪುರುಷಾಗ್ನಿ ಎಂಬ ಆಹುತಿ ಸ್ಥಾನದಿಂದ ಜೀವನನ್ನು ದೇವತೆಗಳು ರೇತಸ್ಸಿನಲ್ಲಿ ಸೇರಿಸುತ್ತಾರೆ.[7]

ಪರಮಾತ್ಮನ ಅನಿರುದ್ಧರೂಪವು ಸ್ತ್ರೀಯಲ್ಲಿದೆ. ಈ ರೂಪವು ಎಲ್ಲರಿಂದಲೂ ಪ್ರೀತಿಸಲ್ಪಡುವುದರಿಂದ ಯೋಷಾ (ಸರ್ವಜೋಷ್ಯತ್ವಾತ್) ಎಂಬ ಹೆಸರುಳ್ಳದ್ದು. (ಯೋಷಾನಾಮಾ) ಇದೂ ಒಂದು ಅಗ್ನಿ. ಅನಿರುದ್ಧ ನಾರಾಯಣ ಎಂಬ ಭಗವತ್ ಸ್ವರೂಪವು ಈ ಅಗ್ನಿಯ ಸಮಿಧೆ. ಇದು ಉಪಸ್ಥದಲ್ಲಿದ್ದು ಸದಾ ರಕ್ಷಕನಾಗಿ ಜೀವರ ಹತ್ತಿರ ಇರುವುದರಿಂದ ಉಪಸ್ಥ ಎಂಬ ಹೆಸರುಳ್ಳದ್ದಾಗಿದೆ. (ಉಪಸ್ಥಿತೇಃ ಉಪಸ್ಥನಾಮಾ). ಅನಿರುದ್ಧ ವಾಸುದೇವ ರೂಪವು ಈ ಯೋಷಾಗ್ನಿಯ ಧೂಮ – ಈ ರೂಪವು ಸಂಭೋಗಕ್ಕಾಗಿ ಸ್ತ್ರೀಪುರುಷರಲ್ಲಿ ನಡೆಯತಕ್ಕಸಂಭಾಷಣೆಯಲ್ಲಿದ್ದು, ಇಂತಹ ಸಂಭಾಷಣೆಗೆ ಪ್ರೇರಕವಾದ ಕಾರಣ ಉಪಮಂತ್ರಣ ಎಂಬ ಹೆಸರುಳ್ಳದ್ದು. ಅನಿರುದ್ಧ ಸಂಕರ್ಷಣವೆಂಬ ಭಗವತ್ ಸ್ವರೂಪವು ಈ ಅಗ್ನಿಯ ಅರ್ಚಿ ಇದು ಯೋನಿಯಲ್ಲಿದ್ದು ಸ್ತ್ರೀಪುರುಷರನ್ನು ಒಟ್ಟು ಸೇರಿಸುವ ಕಾರಣ ಯೋನಿ ಎಂದು ಕರೆಯಲ್ಪಡುತ್ತದೆ. (ಯುನಕ್ತಿಮಿಶ್ರೀಕರೋತಿ ಇತಿ ಯೋನಿನಾಮಾ) ಅನಿರುದ್ಧ ಪ್ರದ್ಯುಮ್ನ ಎಂಬ ಭಗವತ್ ಸ್ವರೂಪವು ಈ ಯೋಷಾಗ್ನಿಯ ಅಂಗಾರ. ಇದು ಯೋನಿಯೊಳಗೆ ನಡೆಯುವ ಸುರತವ್ಯಾಪಾರದಲ್ಲಿದ್ದು ಈ ವ್ಯಾಪಾರವನ್ನು ನಡೆಸಿಕೊಡುವುದರಿಂದ ಅಂತಃಕರಣ ಎಂಬ ಹೆಸರುಳ್ಳದ್ದಾಗಿದೆ. ಅನಿರುದ್ಧ ಅನಿರುದ್ಧ ಎಂಬ ಭಗವತ್‌ಸ್ವರೂಪವು ಈ ಅಗ್ನಿಯ ವಿಷ್ಫುಲಿಂಗ. ಇದು ಸುರತದಿಂದುಂಟಾಗುವ ಅಭಿನಂದ (ಸಂತೋಷ)ದಲ್ಲಿದೆ. ಇಂತಹ ಸಂತೋಷ ಉಂಟಾಗುವಂತೆ ಮಾಡುವ ಕಾರಣ ಈ ರೂಪವು 'ಅಭಿನಂದ' ಎಂದು ಕರೆಯಲ್ಪಡುತ್ತದೆ. (ಅಭಿನಂದಯತೀತಿ ಅಭಿನಂದನಾಮಾ).[8]

ಅನಿರುದ್ಧನೆಂಬ ಈ ಯೋಷಾಗ್ನಿಯಲ್ಲಿ ದೇವತೆಗಳು ರೇತಸ್ಸಿನಲ್ಲಿರುವ ಜೀವನನ್ನು ಹೋಮಿಸುತ್ತಾರೆ. ಈ ಯೋಷಾಗ್ನಿಯೆಂಬ ಆಹುತಿ ಸ್ಥಾನದಿಂದ ಜೀವನನ್ನು ದೇವತೆಗಳು

---

7. ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಅನ್ನಂ ಜುಹ್ವತಿ । ತಸ್ಯಾಃ ಆಹುತೇಃ ರೇತಃ ಸಂಭವತಿ ॥

8. ಯೋಷಾ ವಾವ ಗೌತಮಾಗ್ನಿಃ । ತಸ್ಯಾಃ ಉಪಸ್ಥ ಏವ ಸಮಿತ್ ।
ಯದುಪಮಂತ್ರಯತೇ ಸ ಧೂಮಃ । ಯೋನಿರರ್ಚಿಃ ।
ಯದಂತಃ ಕರೋತಿ ತೇ ಅಂಗಾರಾಃ । ಅಭಿನಂದಾಃ ವಿಷ್ಫುಲಿಂಗಾಃ ॥

ಸ್ತ್ರೀಯ ಗರ್ಭದಲ್ಲಿ ಸೇರಿಸುತ್ತಾರೆ. ಅಲ್ಲಿ ಅವನು ತನ್ನ ಶರೀರವನ್ನು ಸಂಪಾದಿಸಿಕೊಳ್ಳುತ್ತಾನೆ.[9]

ಐದನೆಯ ಆಹುತಿಯಲ್ಲಿ ಜೀವನು ಪಂಚಭೂತವಿಕಾರವಾದ ಶರೀರವನ್ನು ಸಂಪಾದಿಸಿ ಪುರುಷನೆಂಬ ಹೆಸರುಳ್ಳವನಾಗುತ್ತಾನೆ. ಹೀಗೆ ಶರೀರಧಾರಿಯಾದ ಜೀವನು ಜರಾಯು ಎಂಬ ಗರ್ಭಚೀಲದಿಂದ ಆವರಿಸಲ್ಪಟ್ಟು ಹತ್ತುತಿಂಗಳು ಅಥವಾ ಎಷ್ಟು ಕಾಲ ಇರಬೇಕೋ ಅಷ್ಟುಕಾಲ ಸ್ತ್ರೀಯ ಉದರದಲ್ಲಿ ಮಲಗಿದ್ದು ಅನಂತರ ಹುಟ್ಟುತ್ತಾನೆ.[10]

**ಜೀವನು ಭೂಲೋಕಕ್ಕೆ ಬರುವ ಕ್ರಮ**

| ಆಹುತಿಕ್ರಮ | ದ್ಯು | ಪರ್ಜನ್ಯ | ಧರಾ | ಪುಂ | ಸ್ತ್ರೀ |
|---|---|---|---|---|---|
| ಮುಖ್ಯ<br>ಭಗವದ್ರೂಪ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ಸಮಿಧೆ<br>ಭಗವದ್ರೂಪ | ಸೂರ್ಯ<br>ನಾರಾಯಣ<br>ನಾರಾಯಣ | ವಾಯು<br>ವಾಸುದೇವ<br>ನಾರಾಯಣ | ಸಂವತ್ಸರ<br>ಸಂಕರ್ಷಣ<br>ನಾರಾಯಣ | ವಾಕ್<br>ಪ್ರದ್ಯುಮ್ನ<br>ನಾರಾಯಣ | ಉಪಸ್ಥ<br>ಅನಿರುದ್ಧ<br>ನಾರಾಯಣ |
| ಧೂಮ<br>ಭಗವದ್ರೂಪ | ರಶ್ಮಿ<br>ನಾರಾಯಣ<br>ವಾಸುದೇವ | ಅಭ್ರ<br>ವಾಸುದೇವ<br>ವಾಸುದೇವ | ಆಕಾಶ<br>ಸಂಕರ್ಷಣ<br>ವಾಸುದೇವ | ಪ್ರಾಣ<br>ಪ್ರದ್ಯುಮ್ನ<br>ವಾಸುದೇವ | ಉಪಮಂತ್ರಣ<br>ಅನಿರುದ್ಧ<br>ವಾಸುದೇವ |
| ಅರ್ಚಿ<br>ಭಗವದ್ರೂಪ | ಅಹಃ<br>ನಾರಾಯಣ<br>ಸಂಕರ್ಷಣ | ವಿದ್ಯುತ್<br>ವಾಸುದೇವ<br>ಸಂಕರ್ಷಣ | ರಾತ್ರಿ<br>ಸಂಕರ್ಷಣ<br>ಸಂಕರ್ಷಣ | ಜಿಹ್ವೆ<br>ಪ್ರದ್ಯುಮ್ನ<br>ಸಂಕರ್ಷಣ | ಯೋನಿ<br>ಅನಿರುದ್ಧ<br>ಸಂಕರ್ಷಣ |
| ಅಂಗಾರ<br>ಭಗವದ್ರೂಪ | ಚಂದ್ರ<br>ನಾರಾಯಣ<br>ಪ್ರದ್ಯುಮ್ನ | ಸಿಡಿಲು<br>ವಾಸುದೇವ<br>ಪ್ರದ್ಯುಮ್ನ | ದಿಕ್<br>ಸಂಕರ್ಷಣ<br>ಪ್ರದ್ಯುಮ್ನ | ಚಕ್ಷುಸ್<br>ಪ್ರದ್ಯುಮ್ನ<br>ಪ್ರದ್ಯುಮ್ನ | ಅಂತಃಕರಣ<br>ಅನಿರುದ್ಧ<br>ಪ್ರದ್ಯುಮ್ನ |
| ಕಿಡಿ<br>ಭಗವದ್ರೂಪ | ನಕ್ಷತ್ರ<br>ನಾರಾಯಣ<br>ಅನಿರುದ್ಧ | ಗರ್ಜನೆ<br>ವಾಸುದೇವ<br>ಅನಿರುದ್ಧ | ಅವಾಂತರ ದಿಕ್<br>ಸಂಕರ್ಷಣ<br>ಅನಿರುದ್ಧ | ಶ್ರೋತ್ರ<br>ಪ್ರದ್ಯುಮ್ನ<br>ಅನಿರುದ್ಧ | ಅಭಿನಂದ<br>ಅನಿರುದ್ಧ<br>ಅನಿರುದ್ಧ |



9. ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ರೇತೋ ಜುಹ್ವತಿ ।
ತಸ್ಯಾಃ ಆಹುತೇಃ ಗರ್ಭಃ ಸಂಭವತಿ ॥

10. ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತಿ ।
ಸ ಉಲ್ಬಾವೃತೋ ಗರ್ಭೋ ದಶ ವಾ ಮಾಸಾನಂತಃ ಶಯಿತ್ವಾಯಾವದ್ವಾಽಥ ಜಾಯತೇ ॥

# ಜೀವನ ಗರ್ಭವಾಸ ದುಃಖದ ವಿವರಣೆ

(ತೃತೀಯ ಸ್ಕಂಧ ಭಾಗವತದಿಂದ ಉದ್ಧೃತ)

ಕರ್ಮಫಲವನ್ನು ಅನುಭವಿಸಿದ ಜೀವನು ಮಳೆಯ ಮೂಲಕ ಭೂಲೋಕಕ್ಕೆ ಬರುತ್ತಾನೆ. ಅದೃಷ್ಟನಿಯಾಮಕನಾದ ಶ್ರೀಹರಿಯು ಇವನ ಕರ್ಮಕ್ಕೆ ಅನುಗುಣವಾದ ದೇಹವನ್ನು ಕೊಡುವುದಕ್ಕಾಗಿ ಇವನನ್ನು ಆಹಾರದ ಮೂಲಕ ಪುರುಷ ದೇಹದಲ್ಲಿ ಸೇರಿಸಿ ರೇತಸ್ಸಿನಲ್ಲಿ ಅಡಗಿಸಿಡುವನು. ಈ ರೇತಸ್ಸಿನ ಮೂಲಕ ಸ್ತ್ರೀಯ ಯೋನಿಯನ್ನು ಹೊಕ್ಕು ಗರ್ಭಕೋಶವನ್ನು ಪ್ರವೇಶಿಸುವಂತೆ ಮಾಡುವನು. ಅಲ್ಲಿ ರೇತಃ ಕಣದೊಂದಿಗೆ ಶೋಣಿತವನ್ನು ಸೇರಿಸಿ ಒಂದು ರಾತ್ರಿಯಲ್ಲಿ ಗಟ್ಟಿಯಾದ ಗಂಜಿಯಂತೆ, ಐದು ರಾತ್ರಿಗಳಲ್ಲಿ ಗುಂಡಗೆ ಗುಳ್ಳೆಯಾಗಿ, ಹತ್ತು ರಾತ್ರಿಗಳಲ್ಲಿ ಸ್ವಲ್ಪ ಗಟ್ಟಿಯಾದ ಪಿಂಡವಾಗಿಯೂ, ಅನಂತರ ಆಯಾ ಯೋನಿಗೆ ತಕ್ಕಂತೆ ಮಾಂಸದ ಮುದ್ದೆ ಅಥವಾ ಮೊಟ್ಟೆಯಾಗುವಂತೆ ಶ್ರೀಹರಿಯು ಮಾಡುವನು. ಒಂದನೆ ತಿಂಗಳಲ್ಲಿ ತಲೆ, ಎರಡನೆ ತಿಂಗಳಲ್ಲಿ ತೋಳು, ಕಾಲು ಮೊದಲಾದ ಅವಯವಗಳು, ಮೂರನೆಯ ತಿಂಗಳಲ್ಲಿ ಉಗುರು, ಕೂದಲು, ಮೂಳೆ, ಚರ್ಮ, ಮತ್ತು ಪುಂ, ಸ್ತ್ರೀ ಚಿಹ್ನೆ ಮತ್ತು ಇಂದ್ರಿಯ ಸ್ಥಾನಗಳಾದ ರಂಧ್ರಗಳು ಹುಟ್ಟುತ್ತವೆ. ನಾಲ್ಕನೆಯ ತಿಂಗಳಲ್ಲಿ ಸಪ್ತ ಧಾತುಗಳು, ಐದನೆಯ ತಿಂಗಳಲ್ಲಿ ಹಸಿವೆ, ನೀರಡಿಕೆಗಳು, ಆರನೆಯ ತಿಂಗಳಲ್ಲಿ ಜರಾಯುವೆಂಬ ಚರ್ಮಚೀಲದ ಆವರಣವೂ, ಉತ್ಪತ್ತಿಯಾಗುತ್ತವೆ. ಆಗ ಮಗುವು ತಾಯಿಯ ಹೊಟ್ಟೆಯ ಬಲಭಾಗದಲ್ಲಿ ಚಲಿಸಲು ಪ್ರಾರಂಭಿಸುತ್ತದೆ. ಆಯಾ ಜೀವನ ಕರ್ಮಾನುಗುಣವಾಗಿ ಏಳನೆಯ ತಿಂಗಳಲ್ಲಿ ಮಗುವಿಗೆ ಹಿಂದಿನ ಜನ್ಮಗಳ ಮತ್ತು ಅವುಗಳಲ್ಲಿ ಮಾಡಿದ ಕರ್ಮಗಳ ಜ್ಞಾನವು ಬರುವದು. ಶ್ರೀಹರಿಯ ಇಚ್ಛೆಯಿಂದ ತನಗೆ ಬಂದಿರುವ ಸಂಸಾರಬಂಧವನ್ನು ಜ್ಞಾನಿಯಾದ ಗರ್ಭವು ಸ್ಮರಿಸಿಕೊಳ್ಳುವದು. ಅಯೋಗ್ಯ ಜೀವವು ಎಲ್ಲವನ್ನೂ ಮರೆತು ಬಿಡುವದು. ರೋಗಿಯು ಮತ್ತೊಬ್ಬರು ಕೊಡುವ ಆಹಾರದಿಂದಲೇ ಬೆಳೆಯುವಂತೆ ಈ ಗರ್ಭವು ತಾಯಿಯು ತಿಂದ ಆಹಾರ ನೀರಿನಿಂದಲೇ ಬೆಳೆಯುತ್ತದೆ. ಗರ್ಭದಲ್ಲಿ ಕ್ರಿಮಿಗಳ ಉತ್ಪತ್ತಿಗೆ ಆಕರವಾದ ಮಲ ಮೂತ್ರಗಳ ಆಶ್ರಯ ಸ್ಥಳದಲ್ಲಿ ಎಷ್ಟೋ ಕ್ರಿಮಿಗಳೊಂದಿಗೆ ಈ ಗರ್ಭವು ಬೆಳೆಯುವದು. ಆ ಕ್ರಿಮಿಗಳು ಹಸಿದಾಗ ಕೋಮಲ ಚರ್ಮದ ಈ ಮಗುವನ್ನು ಪ್ರತಿಕ್ಷಣದಲ್ಲಿ ಕಚ್ಚಿ ಗಾಯಗೊಳಿಸುತ್ತವೆ. ಈ ಬಗೆಯ ಅತಿಯಾದ ನೋವನ್ನು ಸಹಿಸಲಾರದೇ ಆಗಾಗ ಗರ್ಭವು ಮೂರ್ಛೆ ಹೊಂದುತ್ತದೆ. ತಾಯಿಯು ತಿಂದ ಅತಿಯಾದ ಖಾರ, ಉಪ್ಪು ಮತ್ತು ಹುಳಿ ರಸಗಳಿಂದ ಈ ಗರ್ಭಸ್ಥ ಶಿಶುವಿಗೆ ತಾಪವಾಗುವದು. ಎಲ್ಲ

ಅವಯವಗಳಲ್ಲಿಯೂ ಒಟ್ಟಿಗೆ ವೇದನೆಯನ್ನು ಅನುಭವಿಸಬೇಕಾಗುತ್ತದೆ. ಒಳಗೆ ಗರ್ಭಕೋಶ, ಹೊರಗೆ ತಾಯಿಯ ಕರುಳು ಮುಂತಾದ ನರಗಳು, ಈ ತೆಕ್ಕೆಯಲ್ಲಿ ಸಿಕ್ಕಿ ಬಿದ್ದಿರುವ ಗರ್ಭವು ಬೆನ್ನು, ಕತ್ತುಗಳನ್ನು ಬಗ್ಗಿಸಿಕೊಂಡು ಹೊಟ್ಟೆಯ ಮೇಲೆ ತಲೆಯನ್ನಿಟ್ಟು ಕೆಳಮುಖವಾಗಿ ಗರ್ಭದಲ್ಲಿ ಇರುವುದು. ''ಅಕಲ್ಪಃ ಸ್ವಾಂಗ ಚೇಷ್ಟಾಯಾಂ ಶಕುಂತ ಇವ ಪಂಜರೇ'' ಉಕ್ತಿಯಂತೆ ರೆಕ್ಕೆ ಹುಟ್ಟದಿರುವ ಅಥವಾ ಅರ್ಧ ಹುಟ್ಟಿರುವ ಹಕ್ಕಿಯು ಬಲೆಯಲ್ಲಿ ಸಿಕ್ಕಿ ನರಳುವಂತೆ ಈ ಗರ್ಭವು ಅಂಗಚೇಷ್ಟೆಯಲ್ಲಿ ಅಸಮರ್ಥವಾಗಿ ಇರುತ್ತದೆ.

ಆಗ ಗರ್ಭವು ಉತ್ತಮ ಜೀವಿಯಾಗಿದ್ದಲ್ಲಿ ಶ್ರೀಹರಿಯು ಹಿಂದಿನ ನೂರಾರು ಜನ್ಮಗಳ ಮತ್ತು ಆಯಾ ಕರ್ಮಗಳ ನೆನಪನ್ನು ಕೊಡುತ್ತಾನೆ. ಪುಣ್ಯಪಾಪ ಕ್ರಿಯೆಗಳನ್ನು ನೆನೆಸುತ್ತ ಗರ್ಭವು ನೀಳವಾದ ಉಸಿರು ಬಿಡುತ್ತ ದುಃಖ ಹೊಂದುತ್ತದೆ.

ಏಳನೆ ತಿಂಗಳಿಂದ ಹಿಡಿದು ಜ್ಞಾನಯುಕ್ತವಾದ ಗರ್ಭವು ಗರ್ಭದಲ್ಲಿರುವ ಸೂತಿಕಾಗಾಳಿಯಿಂದ ನಡುಗುತ್ತ ಮುಂದೇನು ಗತಿ! ಎಂದು ಸಂಶಯಗೊಂಡು ಕ್ರಿಮಿಯಂತೆ ಒಂದೆಡೆ ನಿಲ್ಲದೇ ಚಲಿಸುತ್ತಿರುತ್ತದೆ. ಸಪ್ತೇಂದ್ರಿಯಗಳಿಂದ ಕೂಡಿದ ಈ ಜ್ಞಾನಿಯಾದ ಗರ್ಭವು ತನ್ನನ್ನು ತಾಯಿಯ ಉದರಕ್ಕೆ ತಂದು ಸೇರಿಸಿದ ಶ್ರೀಹರಿಯನ್ನು ನೆನೆಸಿಕೊಂಡು ಮತ್ತೆ ಈ ಗರ್ಭವಾಸವು ಬೇಡವೆಂದು ಅವನನ್ನು ಪ್ರಾರ್ಥಿಸುತ್ತಾ ಕೈಮುಗಿದು ದೈನ್ಯ ಪೂರ್ಣವಾದ ವಾಣಿಯಿಂದ ಸ್ತೋತ್ರ ಮಾಡುವದು.

''ಶ್ರೀಹರಿಯೇ । ಪಾಪಕರ್ಮಗಳನ್ನೇ ಮಾಡಿದ ನಾನು ಪಾಪಿಯು. ನನ್ನ ಕರ್ಮಕ್ಕೆ ಅನುಗುಣವಾದ ಈ ಗರ್ಭವಾಸ ದುಃಖವನ್ನು ನನಗೆ ಕೊಟ್ಟಿರುವೆ. ಶರಣು ಹೊಂದಿರುವವರನ್ನು ರಕ್ಷಿಸುವವನು ನೀನೆ. ನಿನ್ನ ಪಾದಾರವಿಂದಗಳನ್ನು ಶರಣು ಹೊಂದಿದವರಿಗೆ ಯಾವ ಭಯವೂ ಇರುವುದಿಲ್ಲ. ಈ ದೇಹವು ಪಾಂಚ ಭೌತಿಕವು. ಇದರಲ್ಲಿ ಮನಸ್ಸು ಮೊದಲಾಗಿ ಏಕಾದಶ ಇಂದ್ರಿಯಗಳಿವೆ. ಕರ್ಮಬದ್ಧನಾದ ಜೀವನ ಜೊತೆಯಲ್ಲಿ ನೀನು ಇರುವಿ ಆದರೆ ನೀನು ಬದ್ಧನಲ್ಲ. ಜ್ಞಾನಾನಂದಸ್ವರೂಪಿಯು. ಜೀವನು ನಿನ್ನ ಪ್ರತಿಬಿಂಬನು, ನಿನ್ನಿಂದ ಪ್ರೇರಿತನಾಗಿ ನಿನ್ನ ಮಹಿಮೆಯನ್ನರಿತು ಸ್ತೋತ್ರ ಮಾಡುವನು.

ಸ್ಥಾವರ ಜಂಗಮ ಪದಾರ್ಥಗಳಲ್ಲಿ ನೀನು ಅಂತರ್ಯಾಮಿಯಾಗಿ ಅನೇಕ ರೂಪಗಳಿಂದ ಇರುವೆ. ನೀನು ಯಾವಾಗಲೂ ಅತ್ಯಂತ ಸುಖಸ್ವರೂಪಿಯು, ಪರಿಪೂರ್ಣನು. ಉತ್ತಮ ಜೀವನಿಗೆ ಈ ಹಿಂದಿನ ಜನ್ಮಗಳ ನೆನಪನ್ನು ಕೊಡುವವನು

ನೀನೇ. ಕರ್ಮಾನುಸಾರವಾಗಿ ಸಂಸಾರವನ್ನು ಅನುಭವಿಸುವ ಜೀವರಾದ ನಾವು ನಮ್ಮ ದುಃಖದ ಶಾಂತಿಗಾಗಿ ನಿನ್ನನ್ನೇ ಸೇವಿಸುತ್ತೇವೆ.

ತಾಯಿಯ ಉದರವು ರಕ್ತ ಮಲಮೂತ್ರಗಳ ಮಡುವು. ಅದರಲ್ಲಿ ವಾಸಿಸುವ ಜೀವನು ತಾಯಿಯ ಜಠರಾಗ್ನಿಯಿಂದ ನೊಂದ ದೇಹನಾಗಿ ಎಂದಿಗೆ ಹೊರಗೆ ಹೋಗುವೆ? ಎಂಬುದಾಗಿ ವಿಚಾರಿಸುತ್ತ ತಿಂಗಳುಗಳನ್ನು ಎಣಿಸುತ್ತಿರುವನು. ನೀನೇ ನನ್ನನ್ನು ಹೊರಗೆ ಹಾಕಬೇಕು. ಹೇ ಸರ್ವನಿಯಾಮಕನೇ! ಹತ್ತು ತಿಂಗಳಕಾಲ ಗರ್ಭದಲ್ಲಿ ವಾಸಿಸಬೇಕಾದ ಈ ಜೀವನಿಗೆ ದಯಾಮಯನಾದ ನೀನು ನಿನ್ನ ಜ್ಞಾನವನ್ನು ಅನುಗ್ರಹಿಸಿರುವೆ. ದೀನರಕ್ಷಕನಾದ ನಿನಗೆ ಪ್ರತ್ಯುಪಕಾರವನ್ನು ಮಾಡುವದು ಯಾವನಿಂದಲೂ ಸಾಧ್ಯವಿಲ್ಲ. ಜೀವರಾದ ನಾವು ನಿನಗೆ ಮಾಡುವ ಉಪಕಾರವೆಂದರೆ ಭಕ್ತಿಯಿಂದ ಕೈಮುಗಿಯುವದು ಮಾತ್ರ.

ಸ್ವಾಮಿನ್! ಇಷ್ಟೊಂದು ದುಃಖಪೂರ್ಣವಾದ ಈ ಗರ್ಭದಲ್ಲಿ ವಾಸಿಸುತ್ತಿದ್ದರೂ ನಿನ್ನಿಂದ ಜ್ಞಾನವನ್ನು ಹೊಂದಿದ ನಾನು ಈ ಗರ್ಭದಿಂದ ಹೊರಗೆ ಹೋಗಲು ಇಷ್ಟಪಡುತ್ತಿಲ್ಲ. ಹೊರಗಿನ ಪ್ರಪಂಚವು ಒಂದು ಅಜ್ಞಾನದ ಬಾವಿ. ಅಲ್ಲಿ ಬಿದ್ದಕೂಡಲೇ ನಿನ್ನ ಇಚ್ಛೆಯಂತೆ ನನ್ನನ್ನು ಮಿಥ್ಯಾಜ್ಞಾನವು ಆವರಿಸುವದು. ಈ ದೇಹದಲ್ಲಿ ನಾನು ನನ್ನದು ಎಂಬ ಮಮತೆ ಹುಟ್ಟುವದು. ಅದರ ಫಲವಾಗಿ ಸಂಸಾರ ಚಕ್ರವು ಬೆಳೆಯುತ್ತ ಹೋಗುವದು. ಆದ್ದರಿಂದ ಜ್ಞಾನಿಯಾದ ನಾನು ಈ ಗರ್ಭದಲ್ಲಿಯೇ ಇರಬಯಸುತ್ತೇನೆ. ಆದರೆ ಇದು ಸಾಧ್ಯವಿಲ್ಲ. ನಾನು ಹೊರಗೆ ಹೋಗಲೇಬೇಕು. ನಿನ್ನ ಪಾದಗಳನ್ನು ಹೊಂದಿರುವೆನು. ಅನಿಮಿತ್ತ ಸ್ನೇಹಿತನಾದ ನೀನು ಅನುಗ್ರಹ ಮಾಡು. ನನ್ನ ದುಃಖಗಳು ಪರಿಹಾರವಾಗುವವು. ಮತ್ತೆ ನನಗೆ ಈ ಬಗೆಯ ದುಃಖ ಬರುವ ಸಂಭವವಿಲ್ಲ. ಈ ನರಕದಿಂದ ನಾನು ಉದ್ಧೃತನಾಗುವೆನು. ನಿನಗೆ ನಮಸ್ಕಾರಗಳು" ಎಂಬುದಾಗಿ ಗರ್ಭಸ್ಥ ಶಿಶುವು ಶ್ರೀಹರಿಯನ್ನು ಸ್ತೋತ್ರಮಾಡುವದು.

ಹೀಗೆ ಉತ್ತಮ ಜೀವಿಯಾದ ಶಿಶುವು ಜ್ಞಾನವನ್ನು ಹೊಂದುತ್ತದೆ. ಹತ್ತು ತಿಂಗಳಾದಾಗ ಆ ಗರ್ಭಸ್ಥ ಶಿಶುವನ್ನು ಸೂತಿಕಾ ವಾಯುವು ಗರ್ಭದಿಂದ ಹೊರಗೆ ಹಾಕಲು ಕ್ಷಣಮಾತ್ರದಲ್ಲಿ ತಲೆಕೆಳಗೆ ಮಾಡುವದು. ದೇಹಾಭಿಮಾನದಿಂದ ಕೂಡಿದ ಆ ದೇಹಿಯನ್ನು ವಾಯುವು ಗರ್ಭದಿಂದ ಹೊರಗೆ ತಳ್ಳುವ ಸಂದರ್ಭದಲ್ಲಿ ಬಹುದುಃಖವಾಗಿ ಉಸಿರಾಡಿಸುವದು ಕಷ್ಟವಾಗಿ ಜೀವನಿಗಿದ್ದ ಜ್ಞಾನದ ಸ್ಮೃತಿಯು ತಪ್ಪಿ ಹೋಗುವದು. ಹೀಗೆ ಬಹಳ ಪ್ರಯಾಸದಿಂದ ಶಿಶುವು ತಾಯಿಯ ಉದರದಿಂದ ಹೊರಕ್ಕೆ ಬರುತ್ತದೆ.



# ಜೀವನ ಮರಣಪೂರ್ವಕಾಲದ ಕರ್ತವ್ಯಗಳು.

## (ದ್ವಿತೀಯಸ್ಕಂಧ ಭಾಗವತದಿಂದ)

ಜೀವನು ತನ್ನ ಮರಣಕಾಲವು ಸಮೀಪಿಸಿತೆಂದು ತಿಳಿದು ಶ್ರೀಹರಿಯ ಸ್ಮರಣೆಯನ್ನು ಮಾಡಬಯಸುವವನು ಮೊದಲು ವೈರಾಗ್ಯವನ್ನು ತಂದು ಕೊಳ್ಳಬೇಕು. ಸಾವಿಗಾಗಿ ತಾನು ಹೆದರಬಾರದು. ಬಿದ್ದು ಹೋಗುವ ದೇಹದಲ್ಲಿ ಮಮತೆಯನ್ನು ಬಿಡಬೇಕು. ಅದಕ್ಕೆ ಸಂಬಂಧಿಸಿದ ಹೆಂಡತಿ ಮಕ್ಕಳು ಮೊದಲಾದವರಲ್ಲಿ ಬೇರುಬಿಟ್ಟಿರುವ ಸ್ನೇಹವನ್ನು ಕಿತ್ತೊಗೆಯಬೇಕು. ವಿವೇಕ ಜ್ಞಾನವೆಂಬ "ಅಸಂಗ" ಶಸ್ತ್ರದಿಂದ ಕುಟುಂಬದ ಮೇಲಿನ ಆಸೆಯನ್ನು ಕತ್ತರಿಸಿ ಹಾಕಬೇಕು. ಮನೆಯ ಮೇಲಿನ ಅಭಿಮಾನವನ್ನು ತೊರೆದು ವೈರಾಗ್ಯವನ್ನು ತಂದುಕೊಂಡು, ಬಂದ ಎಡರುಗಳನ್ನು ತೊಡೆದುಹಾಕಿ, ಭಾಗವತ ಮೊದಲಾದ ಪವಿತ್ರವಾದ ಶಾಸ್ತ್ರಗಳನ್ನು, ಶ್ರವಣಮಾಡಿ, ಗಂಗಾ ಮೊದಲಾದ ಪವಿತ್ರ ತೀರ್ಥಗಳಲ್ಲಿ ಮಿಂದು ಒಳಗಿನ ಮತ್ತು ಹೊರಗಿನ ಕೊಳೆಯನ್ನು ಕಳೆದುಕೊಂಡು ಶುದ್ಧವೂ, ದುರ್ಜನ ಸಂಪರ್ಕ ರಹಿತವೂ ಆದ ಪ್ರದೇಶದಲ್ಲಿ, ಶಾಸ್ತ್ರದಲ್ಲಿ ಹೇಳಿರುವಂತೆ ಆಸನವನ್ನು ರಚಿಸಿಕೊಳ್ಳಬೇಕು.

ರೇಚಕ, ಪೂರಕಕುಂಭಕಗಳ ಕ್ರಮದಿಂದ ಪ್ರಾಣಾಯಾಮವನ್ನು ಅಭ್ಯಾಸಮಾಡಿ ವಾಯುದೇವರ ಅನುಗ್ರಹವನ್ನು ಸಂಪಾದಿಸಿಕೊಳ್ಳಬೇಕು. ಆಗ ಮನಸ್ಸನ್ನು ತನ್ನ ಅಧೀನ ವನ್ನಾಗಿ ಮಾಡಿಕೊಂಡು ಸರ್ವಜಗತ್ತಿಗೆ ನಿಮಿತ್ತ ಕಾರಣನಾದ ಗುಣಪೂರ್ಣನಾದ ನಿರ್ದೋಷನಾದ, ಶ್ರೀಹರಿಯನ್ನು ಸ್ಮರಿಸಬೇಕು. ಅಕಾರ, ಉಕಾರ, ಮಕಾರಗಳೆಂಬ ಮೂರು ಅಕ್ಷರಗಳು ಪರಬ್ರಹ್ಮವನ್ನು ಹೇಳುವುದರಿಂದ ಸರ್ವತ್ರ ಇರುವುದೂ, ಉತ್ಕೃಷ್ಟವೂ ಆದ ಓಂಕಾರವನ್ನು ಮನಸ್ಸಿನಿಂದ ಮತ್ತೆ ಮತ್ತೆ ಅಭ್ಯಾಸಮಾಡಬೇಕು. ಹೀಗೆ ಬುದ್ಧಿಯನ್ನು ಸಾರಥಿಯಾಗಿ ಮಾಡಿಕೊಂಡಿರುವ ಪುರುಷನು ತನ್ನ ವಶದಲ್ಲಿರುವ ಮನಸ್ಸಿನ ಮೂಲಕ ಇಂದ್ರಿಯಗಳನ್ನು ವಿಷಯಗಳಿಂದ ಹಿಂದಕ್ಕೆ ಸೆಳೆದು ಸಂಸ್ಕಾರಕ್ಕೆ ತಕ್ಕಂತೆ ಬಹಿರ್ಮುಖವಾಗಿ ಕರ್ಮಗಳಿಂದ ಆಕೃಷ್ಟವಾದ ಮನಸ್ಸನ್ನು ತನ್ನ ಬುದ್ಧಿಯಿಂದ ಪರಮ ಮಂಗಳಕರನಾದ ಶ್ರೀಹರಿಯಲ್ಲಿ ನಿಲ್ಲಿಸಬೇಕು. ಹೀಗೆ ಮನಸ್ಸನ್ನು ನಿಲ್ಲಿಸ ಹೊರಟು ಒಮ್ಮೆಲೇ ಶ್ರೀಹರಿಯ ಎಲ್ಲ ಅವಯವಗಳನ್ನು ಧ್ಯಾನಮಾಡಲು ಅಸಮರ್ಥನಾದಲ್ಲಿ, ವಿಷಯ ಸಂಪರ್ಕವಿಲ್ಲದ ಮನಸ್ಸಿನಿಂದ ಶ್ರೀಹರಿಯ ಪಾದವೇ ಮೊದಲಾದ ಒಂದೊಂದು ಅವಯವಗಳನ್ನು ಧ್ಯಾನ ಮಾಡಬೇಕು.

ಹೀಗೆ ಅಭ್ಯಾಸ ಕ್ರಮದಿಂದ ಒಟ್ಟಿಗೇ ಎಲ್ಲ ಅವಯವಗಳನ್ನು ಧ್ಯಾನಮಾಡುವ ಸಾಮರ್ಥ್ಯವನ್ನು ಸಂಪಾದಿಸಿ ವಿಷಯಗಳಿಂದ ದೂರವಾದ ಮನಸ್ಸನ್ನು ಶ್ರೀಹರಿಯ ಎಲ್ಲ ಅವಯವಗಳನ್ನು ಧ್ಯಾನಮಾಡುವಂತೆ ಮಾಡಿ ಆ ಶ್ರೀಹರಿಯ ಸಮಗ್ರ ರೂಪವನ್ನು ಸ್ಮರಿಸಬೇಕು. ಆಗ ಮನಸ್ಸು ನಿರತಿಶಯವಾದ ಸುಖವನ್ನು ಹೊಂದುವದು. ಹೀಗೆ ಶ್ರೀಹರಿಯ ರೂಪವನ್ನು ಸ್ಮರಿಸಬೇಕೇ ಹೊರತು ಮತ್ತೆ ಯಾವುದನ್ನೂ ಸ್ಮರಿಸಬಾರದು. ರಜೋಗುಣ ಪ್ರಭಾವದಿಂದ ಮನಸ್ಸು ವಿಷಯಗಳಲ್ಲಿ ಮಗ್ನವಾಗುವದು, ತಮೋಗುಣ ಪ್ರಭಾವದಿಂದ ಕರ್ತವ್ಯ ಅಕರ್ತವ್ಯಗಳನ್ನು ತಿಳಿಯದೇ ಮೂಢವಾಗುವದು. ಇಂತಹ ಮನಸ್ಸನ್ನು ಅಖಂಡ ತೈಲಧಾರೆಯಂತೆ ಸಂತತವಾದ ಧ್ಯಾನದಿಂದ ಶ್ರೀಹರಿಯಲ್ಲಿ ತೊಡಗಿಸಬೇಕು. ಈ ಬಗೆಯ ಸಂತತ ಧ್ಯಾನವು, ಮನಸ್ಸಿನ ಕೊಳೆಯೆನಿಸಿದ ರಾಗ, ಅವಿದ್ಯಾ ಮೊದಲಾದವುಗಳನ್ನು ಸಂಪೂರ್ಣವಾಗಿ ತೊಡೆದು ಹಾಕುತ್ತದೆ. ಹೀಗೆ ಶ್ರೀಹರಿಯಲ್ಲಿ ಮನಸ್ಸನ್ನು ನಿಲ್ಲಿಸುವವನೇ ಧೀರನೆನಿಸುವನು.

ಹೀಗೆ ಸಂತತ ಧ್ಯಾನರೂಪವಾದ ಧಾರಣೆಯಿಂದ ಸರ್ವಜಗತ್ತಿಗೆ ಆಶ್ರಯನೂ, ಪರಮ ಮಂಗಳರೂಪನೂ ಆದ ಶ್ರೀಹರಿಯನ್ನು ಆಲೋಚಿಸುವ ಯೋಗಿಗೆ ಶ್ರೀಹರಿಯಲ್ಲಿ ಭಕ್ತಿಯು ಬಹು ಶೀಘ್ರವಾಗಿ ಸಿದ್ಧಿಸುತ್ತದೆ. ಅದರಿಂದ ಶ್ರೀಹರಿಯ ಅಪರೋಕ್ಷಜ್ಞಾನವೂ, ಮೋಕ್ಷವೂ ತಪ್ಪದೇ ಲಭಿಸುತ್ತವೆ.



# ಜೀವನು ಮರಣ ಹೊಂದಿದ ಮೇಲೆ ಕ್ರಮಿಸುವ ಯಮಮಾರ್ಗ (ಗರುಡ ಪುರಾಣದಲ್ಲಿ ತಿಳಿಸಿದಂತೆ)

ಕೇವಲ ಕುಟುಂಬ ಭರಣದಲ್ಲಿಯೇ ಆಸಕ್ತನಾಗಿ, ಇಂದ್ರಿಯ ಲೋಲುಪನಾಗಿ ಜೀವನವನ್ನು ಸಾಗಿಸಿದ ಜೀವನು ಮರಣಕಾಲದಲ್ಲಿ ಅತ್ಯಂತ ವೇದನೆಗೆ ಒಳಗಾಗಿ ಬುದ್ಧಿಯ ವ್ಯಾಪಾರವೇ ಇಲ್ಲದವನಾಗಿ ತನ್ನ ಬಾಂಧವರು ನೋಡುತ್ತಿದ್ದಂತೆಯೇ ಮೃತನಾಗುತ್ತಾನೆ. ದೇಹದ ಸಂಯೋಗವೇ ಹುಟ್ಟು, ದೇಹದ ವಿಯೋಗವೇ (ಅವಸಾನವೇ) ಸಾವು ಎಂದು ತಿಳಿಯಬೇಕು. ಉತ್ಪತ್ತಿ ನಾಶಗಳು ದೇಹಕ್ಕೆ ಹೊರತು ಜೀವನಿಗಲ್ಲ ಅವನು ನಿತ್ಯನಾಗಿದ್ದಾನೆ.

ಯಮಲೋಕದ ಮಾರ್ಗವು ಅತ್ಯಂತ ದುರ್ಗಮವಾಗಿರುತ್ತದೆ. ಆದರೆ ಪುಣ್ಯಮಾಡಿದ ಜೀವನಿಗೆ ಅದು ಸುಖದಾಯಕವಿರುತ್ತದೆ. ಪಾಪಿಯಾದ ಜೀವನಿಗೆ ದುಃಖದಾಯಕವಾಗಿರುತ್ತದೆ.

ಪಾಪಿಯಾದ ಜೀವನು ಸಾಯುವ ಕಾಲದಲ್ಲಿ ಭಯವನ್ನುಂಟುಮಾಡುವ ಕೋಪದಿಂದ ಕೆಂಪಡರಿದ ಕಣ್ಣುಗಳುಳ್ಳ ಇಬ್ಬರು ಯಮದೂತರನ್ನು ಕಾಣುತ್ತಾನೆ. ಅವರನ್ನು ನೋಡಿದೊಡನೆಯೇ ಇವನ ಎದೆಯು ಝುಗ್ಗೆನ್ನುವದು. ಭೀತನಾದ ದೇಹಿಯು ಕೂಡಲೇ ಮಲಮೂತ್ರಗಳನ್ನು ಮಾಡಿಕೊಳ್ಳುವನು-

ಯಮದೂತರು ಇವನಿಗೆ ಯಾತನಾ ದೇಹವನ್ನು ತೋರಿಸಿ ಅದರೊಳಗೆ ಆ ಜೀವನು ಪ್ರವೇಶಿಸುವಂತೆ ಮಾಡುವರು. ಆಗ ಅವನನ್ನು ಕುತ್ತಿಗೆಯಲ್ಲಿ ಹಗ್ಗದಿಂದ ಕಟ್ಟಿ ರಾಜಭಟರು ಅಪರಾಧಿಯನ್ನು ಎಳೆದೊಯ್ಯುವಂತೆ ಬಹುದೂರದ ನರಕಕ್ಕೆ ಎಳೆದೊಯ್ಯುವರು. ದಾರಿಯಲ್ಲಿ ಅವರ ಬೆದರಿಕೆಗಳಿಂದ ಎದೆಯೊಡೆದು ನಡುಗುತ್ತ ಆರ್ತನಾಗಿ ತಾನು ಮಾಡಿದ ಪಾಪಗಳನ್ನು ನೆನೆಸಿಕೊಂಡು ಮುಂದುವರೆಯುತ್ತಿರಲು ನಾಯಿಗಳು ಇವನನ್ನು ಕಿತ್ತಿ ತಿನ್ನುವವು. ದಾರಿಯುದ್ದಕ್ಕೂ ಬಿಸಿಲಿನ – ತಾಪ ಕಾಡುಗಿಚ್ಚು ಚಂಡಮಾರುತ, ಇವುಗಳಿಂದ ಸಂತಪ್ತನಾದ ಯಾತನಾ ದೇಹಿಯು ಹಸಿವು ಬಾಯಾರಿಕೆಗಳಿಂದ ಬಳಲಿ ಕಾದಮರಳಿನ ದಾರಿಯಲ್ಲಿ ಹೆಜ್ಜೆ ಇಡಲಾರದೇ ಹೆಜ್ಜೆ ಇಡುವನು. ನಿಲ್ಲಲು ನೆರಳಿಲ್ಲ ಕುಡಿಯಲುನೀರಿಲ್ಲ. ನೀರು ಕೇಳಲು ಯಮದೂತರು ಛಾವಟಿಗೆಯಿಂದ ಹೊಡೆದು ನಡೆ ನಡೆ ಎಂದು ಗದರಿಸುವರು. ಶ್ರಾಂತನಾದ ಜೀವನು ಮುಗ್ಗರಿಸುವನು. ಮೂರ್ಛೆ ಬೀಳುವನು ಮತ್ತೆ ಚೇತರಿಸಿಕೊಳ್ಳುವನು. ಹೀಗೆ ಅವನನ್ನು ಪಾಪಿಗಳು ಹೋಗುವ ಆ ಕತ್ತಲೆಯ ಮಾರ್ಗದಿಂದ ಯಮಭಟರು ಯಮಪಟ್ಟಣಕ್ಕೆ ಎಳೆದೊಯ್ಯುವರು.

ತೊಂಭತ್ತೊಂಭತ್ತು ಸಾವಿರ ಯೋಜನಗಳ ಉದ್ದವಿರುವ ಆ ದೀರ್ಘಮಾರ್ಗವನ್ನು ಕರ್ಮಾನುಗುಣವಾಗಿ ಎರಡು ಅಥವಾ ಮೂರು ಮುಹೂರ್ತಗಳಲ್ಲಿ ಅಥವಾ ಹತ್ತುದಿನ ಅಥವಾ ಒಂದು ಪಕ್ಷ ಅಥವಾ ಒಂದು ತಿಂಗಳಲ್ಲಿ ನಡೆಯುವವನಾಗಿ ನರಕ ಪ್ರದೇಶವನ್ನು ಸೇರುತ್ತಾನೆ. ಆ ನರಕದಲ್ಲಿ ಅವರವರ ಕರ್ಮಾನುಗುಣವಾಗಿ ವಿವಿಧ ಯಾತನೆಗಳನ್ನು ಅನುಭವಿಸುವನು.

ಒಂದು ಕಡೆ ಯಾತನಾದೇಹಕ್ಕೆ ಎಣ್ಣೆಯಲ್ಲಿ ತೋಯಿಸಿದ ಬಟ್ಟೆಗಳನ್ನು ಸುತ್ತಿ ಕೊಳ್ಳಿಗಳಿಂದ ಉರಿಹಚ್ಚುವರು. ಮತ್ತೊಂದು ಕಡೆ ತನ್ನ ದೇಹದ ಮಾಂಸವನ್ನು ತಾನೇ ಕಿತ್ತು ತಿನ್ನುವನು. ಇನ್ನೊಂದೆಡೆ ಇತರರು ಕಿತ್ತಿ ತಿನ್ನುವರು. ಬೇರೊಂದೆಡೆ ನಾಯಿ,ಹದ್ದು ಮೊದಲಾದ ಪ್ರಾಣಿಗಳು ಅವನ ಯಾತನಾದೇಹದಿಂದ ನರಗಳನ್ನು ಕಿತ್ತಿ ಎಳೆಯುತ್ತಿರುವವು. ಮತ್ತೊಂದು ನರಕದಲ್ಲಿ ತಮ್ಮ ಹಿಂದಿನ ಹಿಂಸೆಯ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಹಾವು, ಚೇಳು, ತಿಗಣೆ ಮೊದಲಾದವು ದೇಹವನ್ನು ಕಚ್ಚಿ ಚೂರು ಚೂರು ಮಾಡುವವು. ಮತ್ತೊಂದು ಪ್ರದೇಶದಲ್ಲಿ ಆನೆ ಮೊದಲಾದ ಕ್ರೂರಪ್ರಾಣಿಗಳು ಅಟ್ಟಿಸಿಕೊಂಡು ಬರುವವು. ಇನ್ನೊಂದು ನರಕದಲ್ಲಿ ಬೆಟ್ಟದ ಶಿಖರಗಳಿಂದ ಕೆಳಗೆ ತಳ್ಳುವರು. ಇನ್ನೊಂದು ಸ್ಥಳದಲ್ಲಿ ಸರಪಳಿಯಿಂದ ಕಟ್ಟಿಹಾಕುವರು. ಮಲಮೂತ್ರಗಳ ಹಳ್ಳಗಳಲ್ಲಿ ನೂಕುವರು. ಗಂಡಾಗಲಿ, ಹೆಣ್ಣಾಗಲಿ ವಿಷಯಾಸಕ್ತರಾಗಿ ಪರಸ್ಪರ ಬೆರೆತು ತಮ್ಮ ತಮ್ಮ ಪಾಪಗಳ ಸಲುವಾಗಿ ತಮಸ್ಸು, ಅಂಧಂತಮಸ್ಸು ರೌರವ ಮೊದಲಾದ ನರಕಗಳನ್ನು ಅನುಭವಿಸುವರು.

ಕುಟುಂಬವನ್ನು ತಾನೇ ರಕ್ಷಿಸುವೆನೆಂದು ತಿಳಿದಿರುವವನೂ, ತನ್ನ ಹೊಟ್ಟೆಯನ್ನು ಮಾತ್ರ ಹೊರೆದು ಕೊಳ್ಳವವನೂ, ಸತ್ತ ಮೇಲೆ ತನ್ನ ದೇಹವನ್ನು ಇಲ್ಲಿಯೇ ಬಿಟ್ಟು ಹೋಗುತ್ತಾನೆ. ಅವುಗಳ ಫಲವಾಗಿ ಮೇಲೆ ಹೇಳಿದ ನರಕ ಯಾತನೆಗಳನ್ನು ಅನುಭವಿಸುತ್ತಾನೆ. ಜೊತೆಯ ಪ್ರಾಣಿಗಳನ್ನು ವಂಚಿಸಿ ಬೆಳೆಸಿಕೊಂಡ ಇವನ ದೇಹವು ಇಲ್ಲಿಯೇ ಬಿದ್ದು ಹೋಗುತ್ತದೆ. ಮಾಡಿದ ಪುಣ್ಯ ಪಾಪಗಳು ಮಾತ್ರ ಇವನನ್ನು ಅನುಸರಿಸುತ್ತವೆ.

ಅವರವರ ಕರ್ಮಾನುಗುಣವಾಗಿ ವಿವಿಧ ನರಕಯಾತನೆಗಳನ್ನು ಅನುಭವಿಸಿದ ಮೇಲೆ ಶುದ್ಧನಾದ ಜೀವನು ಮತ್ತೆ ತನ್ನ ಕರ್ಮಾನುಗುಣವಾದ ಯೋನಿಯಲ್ಲಿ ಜನಿಸುತ್ತಾನೆ. ಅಲ್ಲಿಯೂ ಪುಣ್ಯ ಮಾಡಿದರೆ ಸ್ವರ್ಗವನ್ನೂ, ಪಾಪಮಾಡಿದರೆ ನರಕವನ್ನೂ ಹೊಂದುವನು. ''ಶುಭೇನ ಕರ್ಮಣಾ ಸ್ವರ್ಗಂ ನಿರಯಂಚ ವಿಕರ್ಮಣಾ'' ಈ ಅಣುಭಾಷ್ಯದ ಉಕ್ತಿಯನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

★★★

# ಜೀವರು ಕ್ರಮಿಸುವ ದೇವಯಾನ-ಪಿತೃಯಾನ ಮಾರ್ಗಗಳು

(ಛಾಂದೋಗ್ಯ ಉಪನಿಷತ್ ತಿಳಿಸಿರುವಂತೆ)

ಕಾಮ್ಯ ಕರ್ಮವು ಪುನರಾವೃತ್ತಿಗೆ ಕಾರಣವೆಂದು ತಿಳಿದು, ಅದರಲ್ಲಿ ವೈರಾಗ್ಯ ತಾಳಿ ಯಾರು ತಪಸ್ಸಿಗೆ ಯೋಗ್ಯವಾದ ಅರಣ್ಯದಲ್ಲಿ ಶ್ರದ್ಧೆಯಿಂದ ತಪಸ್ಸು ಮುಂತಾದ ನಿವೃತ್ತಕರ್ಮವನ್ನು ಮಾಡುವರೋ ಮತ್ತು ಯಾರು ಪಂಚಾಗ್ನಿ ವಿದ್ಯೆಯಲ್ಲಿ ಹೇಳಿದಂತೆ ಶ್ರೀಹರಿಯ ಧ್ಯಾನ ತತ್ಪರರಾಗುವರೋ, ಅವರು ಇಬ್ಬರೂ ದೇಹತ್ಯಾಗ ಮಾಡಿದ ನಂತರ ಅರ್ಚಿರ್ ಲೋಕವನ್ನು ತಲುಪುತ್ತಾರೆ. ಅಲ್ಲಿಂದ ಅಹರಭಿಮಾನಿ ಲೋಕಕ್ಕೂ, ಅಲ್ಲಿಂದ ಶುಕ್ಲ ಪಕ್ಷಾಭಿಮಾನಿ ಲೋಕಕ್ಕೂ, ಆ ಲೋಕದಿಂದ ಉತ್ತರಾಯಣಾಭಿಮಾನಿ ಲೋಕಕ್ಕೂ ಹೋಗುತ್ತಾರೆ. ಆರು ಮಾಸ ರೂಪವಾದ ಉತ್ತರಾಯಣಾಭಿಮಾನಿ ಲೋಕದಿಂದ ಸಂವತ್ಸರಾಭಿಮಾನಿ ಲೋಕಕ್ಕೂ, ಅಲ್ಲಿಂದ ಆದಿತ್ಯ ಲೋಕಕ್ಕೂ, ಆ ಲೋಕದಿಂದ ಚಂದ್ರಲೋಕಕ್ಕೂ ಅಲ್ಲಿಂದ ವಿದ್ಯುದಭಿಮಾನಿಯಾದ ಭಾರತೀದೇವಿಯ ಲೋಕಕ್ಕೂ ಹೋಗುತ್ತಾರೆ. ಆ ಭಾರತೀದೇವಿಯ ಪತಿಯಾದ ಪ್ರಾಣದೇವರು ಅರ್ಚಿರ್ ಲೋಕದಿಂದ ವಿದ್ಯುಲ್ಲೋಕದ ತನಕ ಬಂದಿರುವ ಭಗವದ್ಭಕ್ತರನ್ನು ಪರಬ್ರಹ್ಮನ ಹತ್ತಿರಕ್ಕೆ ಕಳುಹಿಸಿಕೊಡುತ್ತಾರೆ. ಈ ರೀತಿಯಾದುದು ದೇವಯಾನ ಮಾರ್ಗ.[1]

ಯಾವ ಕಾಮ್ಯಕರ್ಮಿಗಳು ಗ್ರಾಮದಲ್ಲಿ ಯಾಗ. ಸರೋವರಾದಿಗಳ ನಿರ್ಮಾಣ, ದಾನ, ಮೊದಲಾದ ಪ್ರವೃತ್ತಕರ್ಮದಲ್ಲಿ ತೊಡಗುವರೋ ಅವರು ಧೂಮಾಭಿಮಾನಿಯ ಲೋಕಕ್ಕೆ ಹೋಗುತ್ತಾರೆ. ಅಲ್ಲಿಂದ ರಾತ್ರ್ಯಭಿಮಾನಿ ಲೋಕಕ್ಕೂ, ಆ ಲೋಕದಿಂದ ಕೃಷ್ಣಪಕ್ಷಾಭಿಮಾನಿ ಲೋಕಕ್ಕೂ, ಅಲ್ಲಿಂದ ದಕ್ಷಿಣಾಯನಾಭಿಮಾನಿ ಲೋಕಕ್ಕೂ ಹೋಗುತ್ತಾರೆ. ಮುಂದೆ ಸಂವತ್ಸರಾಭಿಮಾನಿ ಲೋಕಕ್ಕೆ ಹೋಗುವದಿಲ್ಲ. ಆರು ಮಾಸರೂಪವಾದ ದಕ್ಷಿಣಾಭಿಮಾನಿ ಲೋಕದಿಂದ ಪಿತೃಲೋಕಕ್ಕೆ ಹೋಗುತ್ತಾರೆ. ಅಲ್ಲಿಂದ ಆಕಾಶಾಭಿಮಾನಿಯಾದ ವಿನಾಯಕನ ಲೋಕಕ್ಕೂ ನಂತರ ಚಂದ್ರಲೋಕಕ್ಕೂ

---

1. ತದ್‌ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷ ಮಭಿಸಂಭವಂತಿ । ಅರ್ಚಿಷೋಽಹಃ । ಅಹ್ನಃ ಆಪೂರ್ಯಮಾಣಪಕ್ಷಮ್ । ಆಪೂರ್ಯಮಾಣಪಕ್ಷಾತ್ ಯಾನ್ ಷಡುದಙ್ ಏತಿ ಮಾಸಾನ್ ತಾನ್ ॥ ಮಾಸೇಭ್ಯಃ ಸಂವತ್ಸರಂ । ಸಂವತ್ಸರಾದಾದಿತ್ಯಂ । ಆದಿತ್ಯಾತ್ ಚಂದ್ರಮಸಂ । ಚಂದ್ರಮಸೋ ವಿದ್ಯುತಂ । ತತ್ಪುರುಷೋ ಮಾನವಃ । ಸ ಏನಾನ್ ಬ್ರಹ್ಮಗಮಯತಿ । ಏಷಃ ದೇವಯಾನಃ ಪಂಥಾ ಇತಿ ॥

ಹೋಗುತ್ತಾರೆ. ಈ ಚಂದ್ರನು ಸೋಮಲತೆಗೆ ಅಭಿಮಾನಿ ದೇವತೆಯಾಗಿರುವನು. ಆದ್ದರಿಂದ ಅವನು ದೇವತೆಗಳ ಅನ್ನರೂಪನಾಗಿರುವನು. ಆ ಅನ್ನವನ್ನು ದೇವತೆಗಳೇ ಭಕ್ಷಿಸುವರು.[2]

ಈ ಚಂದ್ರಲೋಕದಲ್ಲಿ ಕಾಮ್ಯ ಕರ್ಮಿಗಳು ತಮ್ಮ ಕರ್ಮಕ್ಷಯವಾಗುವ ತನಕ ವಾಸಮಾಡಿ ಹಾಗೇ ಹಿಂತಿರುಗುತ್ತಾರೆ. ಆದ್ದರಿಂದ ಚಂದ್ರಲೋಕ ಎಂದೂ ಪೂರ್ಣವಾಗಿ ತುಂಬಿ ಹೋಗುವುದಿಲ್ಲ. ಯಾವ ದಾರಿಯಿಂದ ಹೋಗಿದ್ದರೋ ಅದೇ ದಾರಿಯಿಂದ ಹೊರಟು ಬರುತ್ತಾರೆ. ಚಂದ್ರಲೋಕದಿಂದ ಆಕಾಶಾಭಿಮಾನಿ ಲೋಕಕ್ಕೆ ಹೋದ ದಾರಿಯಲ್ಲಿ ಹಿಂದಿರುಗುತ್ತಾರೆ. ಆದರೆ ಅಲ್ಲಿಂದ ಮುಂದೆ ಮಾರ್ಗ ಬೇರೆಯಾಗುತ್ತದೆ. ಆಕಾಶಾಭಿಮಾನಿ ಲೋಕದಿಂದ ಪಿತೃಲೋಕಕ್ಕೆ ಹೋಗದೇ ವಾಯುಲೋಕಕ್ಕೆ ಬರುತ್ತಾರೆ. ಅಲ್ಲಿ ವಾಯ್ವಭಿಮಾನಿಯ ಸಾಯುಜ್ಯವನ್ನು ಹೊಂದಿ ಧೂಮಾಭಿಮಾನಿ ಲೋಕಕ್ಕೆ ಬಂದು ಅಲ್ಲಿ ಧೂಮಾಭಿಮಾನಿ ದೇವತೆಯ ಸಾಯುಜ್ಯವನ್ನು ಪಡೆಯುತ್ತಾರೆ. ಅಲ್ಲಿಂದ ಅಭ್ರಾಭಿಮಾನಿ ಲೋಕಕ್ಕೆ ತಲುಪಿ ಆ ದೇವತೆಯ ಸಾಯುಜ್ಯವನ್ನು ಹೊಂದುತ್ತಾರೆ. ಶಿಥಿಲಾವಯವವುಳ್ಳ ಮೋಡವಾದ ಅಭ್ರಾಭಿಮಾನಿ ಲೋಕದಿಂದ ನಿಬಿಡಾವಯವವುಳ್ಳ ಮೋಡವಾದ ಮೇಘಾಭಿಮಾನಿ ಲೋಕಕ್ಕೆ ಹೋಗಿ, ಅಲ್ಲಿ ಆ ದೇವತೆಯ ಸಾಯುಜ್ಯವನ್ನು ಹೊಂದಿ, ಅಲ್ಲಿಂದ ಮಳೆ ನೀರಿನಲ್ಲಿ ಸೇರಿಕೊಳ್ಳುತ್ತಾರೆ. ಮಳೆಯ ಮೂಲಕ ಭೂಮಿಗೆ ಬಿದ್ದು ಈ ಭೂಮಿಯಲ್ಲಿ ಭತ್ತ, ಗೋದಿ, ಸಸ್ಯಮರಗಳು ಹಾಗೂ ಎಳ್ಳು ಉದ್ದು ಮೊದಲಾದ ಧಾನ್ಯಗಳಲ್ಲಿ ಸೇರಿಕೊಂಡು ಅಲ್ಲಿ ಅಭಿಮಾನಿಗಳಾಗಿರುವ ಬೇರೆ ಜೀವರ ಜೊತೆ ಪರಗೃಹದಲ್ಲಿ ಅತಿಥಿಯು ಇರುವಂತೆ ವಾಸಿಸುತ್ತಾರೆ.[3]

ಆ ಮೇಲೆ ಆ ಜೀವರಿಗೆ ಗರ್ಭವಾಸವೇ ಮೊದಲಾದ ಕಷ್ಟದ ಪರಿಸ್ಥಿತಿ ಉಂಟಾಗುತ್ತದೆ. ಅದು ಹೇಗೆಂದರೆ ಯಾವ ಯಾವ ಪುರುಷರು ಅನ್ನವನ್ನು

2. ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ । ಧೂಮಮಭಿಸಂಭವಂತಿ । ಧೂಮಾದ್ ರಾತ್ರಿಂ । ರಾತ್ರೇರಪರಪಕ್ಷಮ್ । ಅಪರಪಕ್ಷಾತ್‌ಯಾನ್ ಷಡ್ ದಕ್ಷಿಣೈತಿ ಮಾಸಾನ್ ತಾನ್ । ನೈತೇ ಸಂವತ್ಸರಮಭಿಪ್ರಾಪ್ನುವಂತಿ । ಮಾಸೇಭ್ಯಃ ಪಿತೃಲೋಕಂ । ಪಿತೃಲೋಕಾದಾಕಾಶಂ । ಆಕಾಶಾತ್ ಚಂದ್ರಮಸಂ । ಏಷ ಸೋಮೋ ರಾಜಾ ತದ್ದೇವಾನಾಮನ್ನಮ್ । ತಂ ದೇವಾ ಭಕ್ಷಯಂತಿ ॥

3. ತಸ್ಮಿನ್ ಯಾವತ್ ಸಂಪಾತಮುಷಿತ್ವಾಽಥೈತಮೇವಾಧ್ವಾನಂ ಪುನರ್ನಿವರ್ತಂತೇ ಯಥೇತಂ । ಆಕಾಶಮ್ । ಆಕಾಶಾತ್ ವಾಯುಮ್ । ವಾಯುರ್ಭೂತ್ವಾ ಧೂಮೋ ಭವತಿ । ಧೂಮೋ ಭೂತ್ವಾಽಭ್ರಂ ಭವತಿ । ಅಭ್ರಂ ಭೂತ್ವಾ ಮೇಘೋ ಭವತಿ । ಮೇಘೋಭೂತ್ವಾ ಪ್ರವರ್ಷತಿ । ತ ಇಹ ವ್ರೀಹಿಯವಾಃ ಓಷಧಿವನಸ್ಪತಯಃ । ತಿಲಾ ಮಾಷಾಃ ಇತಿ ಜಾಯಂತೇ ॥

ಉಣ್ಣುವವರೋ ಮತ್ತು ಸ್ತ್ರೀಯರಲ್ಲಿ ರೇತಸ್ಸೇಕವನ್ನು ಮಾಡುವವರೋ ಅಂತಹ ಪುರುಷರು ಅವರು ತಿನ್ನುವ ಅನ್ನದ ಮೂಲಕ ಪ್ರವೇಶಿಸಿ ಅವರು ತಿಂದ ಅನ್ನದ ಪರಿಣಾಮದ ರೇತಸ್ಸಿನಲ್ಲಿರುತ್ತಾರೆ. ಹಿಂದಿರುಗಿ ಬರತಕ್ಕ ಕರ್ಮಿಗಳಲ್ಲಿ ಯಾರು ಹಿಂದೆ ಭೂಲೋಕದಲ್ಲಿ ಯೋಗ್ಯವಾದ ಯಾಗವೇ ಮೊದಲಾದ ಸತ್ಕರ್ಮಗಳನ್ನು ಸದಾಚಾರಯುಕ್ತರಾಗಿ ಮಾಡಿರುವವರೋ ಅವರು ಯೋಗ್ಯವಾದ ಬ್ರಾಹ್ಮಣಾದಿ ಶರೀರಗಳಲ್ಲಿ ಜನ್ಮತಾಳುವವರು. ಅವರು ಹಿಂದಿರುಗುವಾಗ ಅನೇಕ ಲೋಕಗಳ ಮೂಲಕ ಬರಬೇಕಾಗಿದ್ದರೂ ಬೇಗನೆ ಅಂದರೆ, ಕೇವಲ ಒಂದು ಸಂವತ್ಸರದ ಅವಧಿಯೊಳಗೆ ಜನ್ಮತಾಳುತ್ತಾರೆ. ಯಾರು ಹಿಂದಿನ ಜನ್ಮದಲ್ಲಿ ದುಷ್ಕರ್ಮ ಪ್ರವೃತ್ತರಾಗಿದ್ದರೋ ಅಂತಹವರು ನಾಯಿ, ಹಂದಿ, ಚಂಡಾಲ ಮೊದಲಾದ ಅಯೋಗ್ಯ ಶರೀರಗಳಲ್ಲಿ ಜನಿಸುತ್ತಾರೆ.[4]

ಹಿಂದೆ ವಿವರಿಸಲ್ಪಟ್ಟ ದೇವಯಾನ ಹಾಗೂ ಪಿತೃಯಾಣಗಳಲ್ಲಿ ಯಾವ ಜೀವರು ಹೋಗುವದಿಲ್ಲವೋ ಅವರು ಅಲ್ಪರು ಮತ್ತು ಸುಖದುಃಖಮಿಶ್ರವಾದ ಜೀವನವುಳ್ಳವರಾಗಿ ಪುನಃ ಪುನಃ ಹುಟ್ಟುತ್ತಾರೆ. ಸಾಯುತ್ತಾರೆ. ಇದು ಸ್ವರ್ಗ ಮೋಕ್ಷ ರೂಪವಾದ ಸ್ಥಾನಗಳಿಗಿಂತ ಬೇರೆಯಾದ ಮೂರನೆಯ ಸ್ಥಾನವಾಗಿದೆ. ಆದ್ದರಿಂದ ಚಂದ್ರಲೋಕವು ಎಂದೂ ಜೀವರಿಂದ ಪೂರ್ಣವಾಗಿ ತುಂಬಿ ಹೋಗುವುದಿಲ್ಲ. ಹೀಗೆ ಗಮನಾಗಮನ ಮತ್ತು ಹುಟ್ಟು ಸಾವುಗಳಿಂದ ದುಃಖಕ್ಕೆ ಕಾರಣವಾದುದರಿಂದ ಜ್ಞಾನ, ನಿಷ್ಕಾಮಕರ್ಮಗಳಿಗಿಂತ ಬೇರೆಯಾದ ಮಾರ್ಗಗಳಲ್ಲಿ ವೈರಾಗ್ಯವನ್ನು ತಾಳಬೇಕಾದುದು ಅವಶ್ಯವಾಗಿದೆ.[5]



4. ತತೋ ವೈಖಲು ದುರ್ನಿಷ್ಪ್ರಪತನಂ । ಯೋ ಯೋ ಹ್ಯನ್ನಮತ್ತಿ ಯೋ ವಾರೇತಃ ಸಿಂಚತಿ ತದ್ಭೂಯ ಏವ ಭವತಿ । ತದ್ಯ ಇಹ ರಮಣೀಯ ಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯ ಯೋನಿಂ ವಾ ವೈಶ್ಯಯೋನಿಂ ವಾ । ಅಥ ಯ ಇಹ ಕಪೂಯಚರಣಾ ಅಭ್ಯಾಶೋಹ ಯತ್ತೇಕ-ಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಂಡಾಲಯೋನಿಂ ವಾ ।

5. ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ ಅಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತಿ । ಏತತ್ ತೃತೀಯಂ ಸ್ಥಾನಂ । ತೇನಾಸೌ ಲೋಕೋ ನ ಸಂಪೂರ್ಯತೇ । ತಸ್ಮಾತ್ ಜುಗಪ್ಸೇತ ॥

ಶ್ರೀ ಛಾಂದ್ಯೋಗ್ಯ ಉಪನಿಷತ್ ॥

# ಜ್ಞಾನಿ ಜೀವರು ಕ್ರಮಿಸುವ ಮಾರ್ಗ

(ದ್ವಿತೀಯಸ್ಕಂಧ ಶ್ರೀಭಾಗವತದಿಂದ)

ಸಂಸಾರದುಃಖವನ್ನು ಕಳೆದುಕೊಳ್ಳಬೇಕೆಂದಿರುವ ಮುಮುಕ್ಷುಗಳು ಶ್ರೀಹರಿಯನ್ನು ಪೃಥಿವೀ ಮೊದಲಾದ ಎಲ್ಲ ಜಗತ್ತಿಗಿಂತ ವಿಲಕ್ಷಣನೆಂದು ಉಪಾಸನೆ ಮಾಡಿ ಸಂಸಾರದಿಂದ ದೂರರಾಗಿ ಅನನ್ಯ ಭಕ್ತಿಯಿಂದ ಕ್ಷಣಕ್ಷಣಕ್ಕೂ ಚಿಂತಿಸಬೇಕು. ಶ್ರೀ ಹರಿಯೇ ಸಮಸ್ತ ಪ್ರಪಂಚಕ್ಕೆ ಒಡೆಯನು. (ಜೀವಬ್ರಹ್ಮರ) ಐಕ್ಯೋಪಾಸನೆಯನ್ನು ಬಿಟ್ಟು ಪ್ರತಿದಿನವೂ ಶ್ರೀಹರಿಯನ್ನು ಕಂಡು ಅನನ್ಯ ಭಕ್ತಿಯಿಂದ ಹಿಂದಿನ ಅಧಿಕಾರಿ ಚೇತನರು ಮುಕ್ತರಾದರು. ಇಂದಿನವರು ಮುಕ್ತರಾಗಲಿರುವರು. ಮುಂದಿನ ಕಲ್ಪಗಳಲ್ಲಿ ಬರುವವರು ಮುಕ್ತರಾಗುವರು ಎಂಬುದಾಗಿ ತಿಳಿಯಬೇಕು.

ಜ್ಞಾನಿಯು ಸ್ಥಿರ ಸುಖಾಸನದಲ್ಲಿ ಕುಳಿತು ದೇಹತ್ಯಾಗವನ್ನು ನಿಶ್ಚಯಿಸಿ ತನ್ನ ಯೋಗ್ಯತೆಗೆ ತಕ್ಕಂತೆ ಬಿಂಬಾಪರೋಕ್ಷವನ್ನು ಹೊಂದಿ ಬಾಹ್ಯಾಂತಃಕರಣವನ್ನು (ಸ್ವರೂಪಕ್ಕಿಂತ ಬೇರೆಯಾದ) ಸಂಪೂರ್ಣವಾಗಿ ನಾಶಮಾಡಿಕೊಳ್ಳುವನು. ಶ್ರೀಹರಿಯ ದರ್ಶನ ಪ್ರಭಾವದಿಂದ ಮಾನಸಿಕ ವಾಸನೆಗಳು ಸುಟ್ಟುಹೋಗುವವು. ಆಗ ಶರೀರಾಯಾಸ ಇಲ್ಲವಾಗುತ್ತದೆ. ಈ ಸ್ಥಿತಿಯಲ್ಲಿ ಜ್ಞಾನಿಯಾದವನು ತನ್ನ ಕಾಲುಗೆಣ್ಣಿನ ಕೆಳಭಾಗದಿಂದ (ಹಿಮ್ಮಡಿ) ಅಪಾನವಾಯು ದ್ವಾರವನ್ನು ತಡೆದು ಮೂಲಾಧಾರದಿಂದ ಉದಾನವಾಯುವನ್ನು ಮೇಲಕ್ಕೆ ತಂದು ನಾಭಿ, ಹೃದಯ, ವಕ್ಷಃಸ್ಥಲ, ದವಡೆಯ ಮೂಲ, ಹುಬ್ಬುಗಳ ಮಧ್ಯ ಮತ್ತು ಶಿರಸ್ಸೆಂಬ ಆರು ಸ್ಥಾನಗಳಲ್ಲಿ ಕ್ರಮವಾಗಿ ಮೇಲಕ್ಕೆ ಏರಿಸಿಕೊಂಡು ಬರುವನು.

ಅಪರೋಕ್ಷ ಜ್ಞಾನಿಯು ಮೂಲಾಧಾರದ ನಾಲ್ಕು ದಳ ಪದ್ಮದಿಂದ ಮೇಲಕ್ಕೆ ತರಲ್ಪಟ್ಟು ನಾಭಿಯಲ್ಲಿರುವ ಆರುದಳಪದ್ಮಕ್ಕೆ ತರಲ್ಪಟ್ಟು ವಾಯುವನ್ನು ಬ್ರಹ್ಮನಾಡಿಯಿಂದ ಹೃದಯದ ಹತ್ತುದಳಪದ್ಮದಲ್ಲಿ ನಿಲ್ಲಿಸಿ ಅಲ್ಲಿಂದ ದ್ವಾದಶದಳ ಪದ್ಮವಿರುವ ವಕ್ಷಃಸ್ಥಳದಲ್ಲಿ ನಿಲ್ಲಿಸಬೇಕು. ಮನಸ್ಸಮಾಧಾನವುಳ್ಳ ಜ್ಞಾನಿಯು ಆ ದ್ವಾದಶದಳ ಪದ್ಮದಿಂದ, ಬುದ್ಧಿಯಿಂದ ಬೇರೊಂದುನಾಡಿಗೆ ವಾಯುವು ಹೋಗದಂತೆ ಅನುಸಂಧಾನಮಾಡಿ ಮೆಲ್ಲನೆ ಹದಿನಾರು ಕಮಲವುಳ್ಳ ದವಡೆಯ ಮೂಲಕ್ಕೆ ವಾಯುವನ್ನು ತಂದು ನಿಲ್ಲಿಸಬೇಕು. ಆ ಹದಿನಾರುದಳ ಕಮಲದಿಂದ ಎರಡು ಹುಬ್ಬುಗಳ ಮಧ್ಯದಲ್ಲಿರುವ ದ್ವಿದಳ ಕಮಲಕ್ಕೆ ತರಬೇಕು. ಕಿವಿ, ಮೂಗು, ಕಣ್ಣು ಮೊದಲಾದ ಏಳು ಮಾರ್ಗಗಳನ್ನು ಬಿಗಿ ಹಿಡಿದು ಬಾಹ್ಯ ಸುಖವನ್ನು ಅಪೇಕ್ಷಿಸದೇ

ಮನಸ್ಸಿನಿಂದ ಶ್ರೀಹರಿಯ ಧ್ಯಾನವನ್ನು ಮಾಡುತ್ತ ಅರ್ಧ ಮುಹೂರ್ತದಷ್ಟು ಕಾಲ ಹುಬ್ಬುಗಳ ಮಧ್ಯದ ಕಮಲದಲ್ಲಿಯೇ ನಿಲ್ಲಿಸಿ ಮಾರ್ಗ ಮಧ್ಯದಲ್ಲಿರುವ ವಿಶೇಷಗಳಲ್ಲಿ ಕುಂಠಿತವಾಗದ ದೃಷ್ಟಿಯುಳ್ಳವನಾಗಿ ಶಿರಸ್ಸಿನ ಮಧ್ಯವನ್ನು ಭೇದಿಸಿ ಕೊಂಡು ದೇಹದಿಂದ ವಾಯುವನ್ನು ಹೊರಗೆ ಹಾಕಬೇಕು. ಅಂದರೆ ಶರೀರವನ್ನು ಬಿಡಬೇಕು. ಉತ್ತಮರಾದ ಯೋಗಿಗಳಿಗೆ ಶ್ರೀಹರಿಯು ಈ ಬಗೆಯ ಮರಣವನ್ನು ಕರುಣಿಸುತ್ತಾನೆಂದು ತಿಳಿಯಬೇಕು.

ಈ ರೀತಿಯಾಗಿ ದೇಹದಿಂದ ಉತ್ಕ್ರಮಣ ಹೊಂದಿದ ಯೋಗಿಯು ಪಕ್ವಾವಸ್ಥೆಯಲ್ಲಿರುವ ಜ್ಞಾನ ಭಕ್ತಿ ಮೊದಲಾದ ಸಾಧನ ಸಾಮಗ್ರಿಗಳನ್ನು ಹೊಂದಿದ್ದಲ್ಲಿ ಬ್ರಹ್ಮಲೋಕವನ್ನು ಸೇರುತ್ತಾನೆ. ಮತ್ತೆ ಹುಟ್ಟು ಸಾವುಗಳಿಗೆ ಎಡೆಯಾಗದೆ ತನ್ನ ಯೋಗ್ಯತೆಗೆ ತಕ್ಕಷ್ಟು ಜ್ಞಾನ ಭಕ್ತಿ ಮೊದಲಾದ ಸಾಧನೆಗಳ ಪರಿಪಾಕಕ್ಕಾಗಿ ಅಲ್ಲಿಯೇ ನೆಲೆಸಿದ್ದು ಬ್ರಹ್ಮ ಪ್ರಳಯಕಾಲದಲ್ಲಿ ಬ್ರಹ್ಮ ದೇವರೊಂದಿಗೆ ಮೋಕ್ಷವನ್ನು ಹೊಂದುತ್ತಾನೆ.

ಪರಿಪಕ್ವವಾಗದ ಸಾಧನವುಳ್ಳವನು ಸಿದ್ಧಪುರುಷರ ವಿಹಾರಸ್ಥಳವಾದ ಮಹರ್ಲೋಕವನ್ನಾಗಲೀ, ಜನೋಲೋಕವನ್ನಾಗಲೀ, ತಪೋಲೋಕವನ್ನಾಗಲೀ ಸೇರುತ್ತಾನೆ. ಅಲ್ಲಿ ಅಣಿಮಾದಿ ಅಷ್ಟ ಸಿದ್ಧಿಗಳನ್ನು ಹೊಂದಿ ವಾಸಮಾಡುವನು. ಅಪ್ರತೀಕಾಲಂಬನನಾದ ಪರಿಪಕ್ವ ಸಾಧನೆಯುಳ್ಳ ಯೋಗಿಯಾಗಿದ್ದಲ್ಲಿ ವೈಕುಂಠದಲ್ಲಿ ಅಮುಕ್ತ ಸ್ಥಳವನ್ನು ಸೇರಿ ಶ್ರೀಹರಿಯನ್ನು ಹೊಂದುತ್ತಾನೆ. ಪ್ರತೀಕಾಲಂಬನನಾಗಿದ್ದರೆ ಸತ್ಯಲೋಕವನ್ನು ಸೇರಿ ಬ್ರಹ್ಮವಾಯುಗಳನ್ನು ಹೊಂದುವವನು. ಈ ಯೋಗಿಗೆ ಮಹರ್ಲೋಕಾದಿಗಳಲ್ಲಿಯೂ ವಿಹಾರಕ್ಕೆ ಅವಕಾಶವಿರುವದು. ಈ ಲೋಕಗಳು ಅಪರೋಕ್ಷ ಜ್ಞಾನಿಗಳಿಗೆ ದೊರೆಯುತ್ತವೇ ಹೊರತು ಕೇವಲ ಜ್ಞಾನಶೂನ್ಯರಾದ ಕರ್ಮಠರಿಗೆ ದೊರೆಯಲಾರವು. ಈ ಲೋಕಗಳಲ್ಲಿ ಇರುವ ಯೋಗಿಗಳಿಗೆ ಬಾಹ್ಯವಾದ ಇಂದ್ರಿಯ ಮನಸ್ಸುಗಳು ದಗ್ಧಪಟದಂತೆ ಇರುತ್ತವೆ. ಮುಕ್ತಸ್ಥಾನದಲ್ಲಿ ಮಾತ್ರ ಮುಕ್ತರಾದವರಿಗೆ ಸ್ವರೂಪಭೂತವಾದ ಚಿದಾತ್ಮಕವಾದ ಇಂದ್ರಿಯಗಳು ಇರುತ್ತವೆ. ಹೊರತು ಪ್ರಾಕೃತವಾದ ಇಂದ್ರಿಯಗಳು ಇರುವುದಿಲ್ಲ.

ಇಂತಹ ಯೋಗಿಗಳು ಸುಷುಮ್ನಾ ನಾಡಿಯಿಂದ ಉತ್ಕ್ರಮಿಸಿ ಹೃದಯಾಕಾಶದಿಂದ ಸುಷುಮ್ನವೆಂಬ ಕಾಂತಿಯಿಂದ ಹೊರಟು ಅರ್ಚಿರಾದಿ ದೇವತೆಗಳನ್ನು ಹೊಂದಿ ವೈಶ್ವಾನರಲೋಕವನ್ನು ಸೇರುವರು. ಅಲ್ಲಿ ತಮ್ಮ ಪಾಪಗಳನ್ನು ಕಳೆದುಕೊಂಡು

ಶ್ರೀಹರಿಯು ಶಿಂಶುಮಾರರೂಪದಿಂದ ಇರುವ ಸ್ಥಳವನ್ನು ಸೇರುವರು. ಪ್ರಾಣಿಗಳ ಜಠರದಲ್ಲಿದ್ದು ಆಹಾರವನ್ನು ಪಚನಮಾಡುವ, ಬ್ರಹ್ಮಾಂಡದ ಮಧ್ಯದಲ್ಲಿ ಅಗ್ನಿ ಲೋಕದಲ್ಲಿರುವ ಪ್ರಧಾನಾಗ್ನಿಯೇ ಈ ವೈಶ್ವಾನರನು. ಈ ಮಾರ್ಗದಲ್ಲಿಯೇ ದೇವಲೋಕ ಪಿತೃಲೋಕಗಳನ್ನು ಅಪರೋಕ್ಷಜ್ಞಾನಿಯು ಸೇರುವನು. ಶರೀರದ ಬಲಭಾಗದ ಪಿಂಗಳಾ ನಾಡಿಗಳಿಂದ ಉತ್ಕ್ರಾಂತರಾದ ಯೋಗಿಗಳು ಅಹಸ್ಸೆಂದು ಕರೆಸುವ ದೇವಮಾರ್ಗವನ್ನು ಸೇರುವರು. ದೇಹದ ಎಡಭಾಗದ ಇಡಾನಾಡಿಗಳಿಂದ ಉತ್ಕ್ರಾಂತರಾದ ಯೋಗಿಗಳು ರಾತ್ರಿಯೆಂಬ ಪಿತೃಮಾರ್ಗವನ್ನು ಸೇರುವರು. ದೇಹದ ಮಧ್ಯದಲ್ಲಿರುವ ಸುಷುಮ್ನಾ ನಾಡಿಯಿಂದ ಉತ್ಕ್ರಾಂತರಾದವರು ಬ್ರಹ್ಮ ಮಾರ್ಗವನ್ನು ಸೇರುವರು. ದೇವ ಮಾರ್ಗದ ಒಳ ಭೇದವೇ ಬ್ರಹ್ಮಮಾರ್ಗ. ಶಿಂಶುಮಾರ ಲೋಕವನ್ನು ಸೇರಿದ ನಂತರ ಆ ಶ್ರೀಹರಿಯ ಆಜ್ಞೆಯನ್ನು ಪಡೆದು ರಾಗಾದಿ ದೋಷರಹಿತರಾಗಿ ಸೂಕ್ಷ್ಮರೂಪದಿಂದ ಎಲ್ಲ ಬ್ರಹ್ಮಜ್ಞಾನಿಗಳೂ ವೈಕುಂಠ ಮೊದಲಾದ ಲೋಕಗಳನ್ನು ಸೇರುವರು. ಇಲ್ಲಿ ಅಪರೋಕ್ಷಜ್ಞಾನಿಗಳು ಒಂದು ಕಲ್ಪ ಆಯುಸ್ಸುಳ್ಳವರಾಗಿ ವಿಹರಿಸುತ್ತಿರುವರು. ಮಹರ್ಲೋಕಾದಿಗಳಲ್ಲಿ ವಾಸಿಸುವ ಜ್ಞಾನಿಗಳು ಪ್ರಳಯಕಾಲದಲ್ಲಿ ಸಂಕರ್ಷಣ ಮುಖದಿಂದ ಹೊರಟ ಬೆಂಕಿಯಿಂದ ಲೋಕಗಳು ಸುಟ್ಟು ಹೋಗುತ್ತಿರು-ವುದನ್ನು ಕಂಡು ಸನಕಾದಿಗಳಿಂದ ಸೇವಿತವಾದ ಸತ್ಯಲೋಕವನ್ನು ಸೇರುವರು. ಈ ಲೋಕವು ಬ್ರಹ್ಮದೇವರ ಒಂದು ಕಲ್ಪ ಪರ್ಯಂತವಿರುವದು. ಅಲ್ಲಿಂದ ಬ್ರಹ್ಮದೇವರೊಂದಿಗೆ ಮುಕ್ತಿಯನ್ನು ಹೊಂದುವರು. ಈ ಸತ್ಯಲೋಕವು ಮಹರ್ಲೋಕಾದಿಗಳಿಂತ ಶ್ರೇಷ್ಠವಾದುದು. ಇಲ್ಲಿ ದುಃಖವಿಲ್ಲ. ಮುಪ್ಪಿಲ್ಲ, ಸಾವಿಲ್ಲ, ಮನೋವ್ಯಥೆಯಿಲ್ಲ, ಉದ್ವೇಗವಿಲ್ಲ. ಬ್ರಹ್ಮಜ್ಞಾನವಿಲ್ಲದೆ ಕರ್ಮದ ಫಲವಾಗಿ ಹುಟ್ಟುಸಾವುಗಳನ್ನು ಹೊಂದುವ ಅಜ್ಞಾನಿಗಳಿಗೆ ಉಂಟಾಗುವ ಮನೋವ್ಯಾಕುಲತೆಯು ಇಲ್ಲಿಲ್ಲ.

ಪ್ರತೀಕಾಲಂಬರು ಮತ್ತು ಅಪ್ರತೀಕಾಲಂಬರೆನಿಸುವ ಅಪರೋಕ್ಷಜ್ಞಾನಿಗಳು ಬ್ರಹ್ಮ ದೇವರ ಪ್ರಳಯಕಾಲದಲ್ಲಿ ತಮಗಿಂತ ಉತ್ತಮರಾದ ಬಿಂಬರೂಪರಲ್ಲಿ ಪ್ರವೇಶಿಸಿ ಗರುಡಮಾರ್ಗ ಮತ್ತು ಶೇಷಮಾರ್ಗಗಳಿಂದ ಸರಸ್ವತೀದೇವಿಯನ್ನು ಪ್ರವೇಶಿಸುವರು. ನಂತರ ಭೌತಿಕ ಶರೀರವುಳ್ಳ ಬ್ರಹ್ಮದೇವರನ್ನು ಪ್ರವೇಶಿಸುವರು ಅನಂತರ ಪೃಥಿವೀ ತತ್ತ್ವವನ್ನು ಅಲ್ಲಿರುವ ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯನ್ನು ಸೇರುವರು. ಅನಂತರ ಅಪ್‌ತತ್ತ್ವದಲ್ಲಿರುವ ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯನ್ನು ಸೇರುವರು. ಅನಂತರ ತೇಜಸ್ತತ್ತ್ವದಲ್ಲಿ ಶ್ರೀಹರಿಯನ್ನು ಸೇರಿ ನಿರ್ಭಯರಾಗಿ ತೇಜೋಮಯರೆನಿಸಿ

ವಾಯುತತ್ತ್ವವನ್ನು ಸೇರುವರು. ಅನಂತರ ಆಕಾಶ ತತ್ತ್ವವನ್ನು ಸೇರುವರು. ಈ ಮೂರು ತತ್ತ್ವಗಳಲ್ಲಿರುವ ಶ್ರೀಹರಿಗೆ ಪ್ರಾಣನೆಂದು ಹೆಸರು. ಜಡತತ್ವಗಳು ತಮ್ಮ ಕಾರಣ ತತ್ವಗಳಲ್ಲಿ ಲೀನವಾಗುವವು ಬ್ರಹ್ಮದೇವರು ಆಯಾ ತತ್ವಗಳಲ್ಲಿನ ತಮ್ಮ ರೂಪದೊಂದಿಗೆ ಐಕ್ಯರಾಗುವರು. ಶ್ರೀಹರಿಯು ತನ್ನ ರೂಪಗಳೊಂದಿಗೆ ಐಕ್ಯನಾಗುವನು. ಆದರೆ ಮಿಕ್ಕವರು ಪ್ರವೇಶಿಸುವರು ಐಕ್ಯವಾಗುವದಿಲ್ಲ ಎಂದು ತಿಳಿಯಬೇಕು.

ಅಪರೋಕ್ಷ ಜ್ಞಾನಿಗಳು ಮುಕ್ತರಾಗಿ ಚಿದಾನಂದಾತ್ಮಕವಾದ ಸ್ವರೂಪ ದೇಹವನ್ನು ಹೊಂದಿ ಆ ಸ್ವರೂಪದೇಹದ ಇಂದ್ರಿಯಗಳಿಂದ ಅತ್ಯುತ್ತಮವಾದ ವಿಷಯಗಳನ್ನು ಅನುಭವಿಸಿ ಶ್ವೇತದ್ವೀಪ ಮೊದಲಾದ ಸ್ಥಳಗಳಲ್ಲಿದ್ದು ಪ್ರಳಯದಲ್ಲಿಯೂ ಮತ್ತೆ ಆವೃತ್ತರಾಗುವುದಿಲ್ಲ. (ಸೃಷ್ಟಿಗೆ ಬರುವದಿಲ್ಲ).



# ಜೀವನಿಗಿರುವ ಎರಡು ಆವರಣಗಳು

ಜೀವನ ಸ್ವರೂಪವನ್ನು ತಿಳಿಯದಂತೆ ಆವರಿಸಿರುವುದು- ''ಜೀವಾಚ್ಛಾದಿಕಾ''. ಜೀವನಿಗೆ ಭಗವಂತನ ಅಪರೋಕ್ಷಜ್ಞಾನವಾಗದಂತೆ ಪ್ರತಿಬಂಧಕವಾಗಿರುವುದು ''ಪರಮಾಚ್ಛಾದಿಕಾ''. ಲಿಂಗಶರೀರದ ಮೇಲೆ ಅನಿರುದ್ಧ ಶರೀರದವರೆಗೆ ''ಜೀವಾ-ಚ್ಛಾದಿಕಾ ಮತ್ತು ಪರಮಾಚ್ಛಾದಿಕಾ'' ಎಂಬ ಎರಡು ಆವರಣಗಳು ಇರುತ್ತವೆ.

ಶ್ರೀ ಗುರು ಪುರಂದರವಿಠ್ಠಲರ ಸುಳಾದಿ ಹೀಗಿದೆ.

ಮನುಜೋತ್ತಮರಿಂದ ಮೊದಲಾಗಿ । ತೃಣ ಜೀವರಿಂದ ಕಡೆಯಾಗಿ ।
ಜೀವಾಚ್ಛಾದಿಕ ಪರಮಾಚ್ಛಾದಿಕವೆಂದು ಬೇರಿಪ್ಪುದು । ಜೀವಾಚ್ಛಾದಿಕವನು ಸಂಹರಿಸೆ । ಪರಮಾಚ್ಛಾದಿಕ ಕಡೆಗೊತ್ತಿ । ಮುಕ್ತರ ಮಾಡುವೆ ಅನಾದಿ ಕಾಲದಿ । ಮುಕುತಿದಾಯಕ ಗುರುಪುರಂದರವಿಠ್ಠಲ ಆಲೋಕದಲ್ಲಿಪ್ಪುದು ॥

''ಅಜೇ ದ್ವೇ ಪ್ರಕೃತೀ ದುಷ್ಟೇ'' ಎಂಬುದನ್ನು ಶ್ರೀವಿಜಯದಾಸಾರ್ಯರು - ಸುಳಾದಿಯೊಂದರಲ್ಲಿ'' ಇಲ್ಲಿ ದುಷ್ಟ ಮಂದಿಗಳಿಬ್ಬರು ಸ್ತ್ರೀವಾಚಕರಯ್ಯಾ । ಎಂದಾಗಿ ಹೇಳುತ್ತ.

**ಜೀವಕೆ ಪ್ರತಿಬಂಧವಾಗಿದ್ದ ಜನರಿವರು ।**
**ದೇವೇಶ ವಿಜಯವಿಠ್ಠಲನಿಂದ ತೊಲಗುವರು ॥** ಎಂದಿರುವುದು ಗಮನಾರ್ಹ.

ಶ್ರೀ ಶ್ರೀನಿವಾಸತೀರ್ಥರು ತಮ್ಮ ಅಣುಭಾಷ್ಯ ವಿವರಣೆಯಲ್ಲಿ ಹೇಳುತ್ತಾರೆ.[1]

ಆವರಣಗಳಿಲ್ಲದಿರುವುದರಿಂದ ಮೋಕ್ಷದಲ್ಲಿ ಸುಖದ ಅಭಿವ್ಯಕ್ತಿ ಏಕೆ ಆಗುವುದಿಲ್ಲ? ಎಂಬ ಶಂಕೆ ಬಂದರೆ - ಆವರಣಗಳು ಎರಡು ವಿಧವಾಗಿವೆ.

---

1. ನನು ಕಥಂ ನ ಮೋಕ್ಷೇ ಸುಖಾಭಿವ್ಯಕ್ತಿಃ । ಆವರಣಾಭಾವಾದಿತಿ ಚೇತ್
ದ್ವಿವಿಧಂ ಹ್ಯಾವರಣಮ್ । ಏಕಮೀಶ್ವರೇಚ್ಛಾರೂಪಮ್ । ಅಪರಂ ಪ್ರಕೃತ್ಯಾದಿ ।
ತತ್ರ ದ್ವಿತೀಯಂ ಮುಕ್ತೌ ನಾಸ್ತ್ಯೇವ । ಆದ್ಯಂತು ವರ್ತತೇ ।
ತಚ್ಚ ಜ್ಞಾನೋತ್ತರಂ ಪಾಪಂ ನಿಮಿತ್ತೀಕೃತ್ಯ ಆನಂದಾನುಭವಂ ಪ್ರತಿಬಧ್ನಾತಿ ।
ಯಥೋಕ್ತಂ - ಅಜೇದ್ವೇ ಪ್ರಕೃತೀ ದುಷ್ಟೇ ಪ್ರೋಕ್ತೇ ಇತ್ಯಾದಿ ।
ಏತೇನ ಯಾವದನುಭೂಯತೇ ಮುಕ್ತೌ ತಾವದೇವ ತತ್ ಸ್ವರೂಪಮಿತಿ ನಿರಸ್ತಮ್ ।
ಸ್ವರೂಪಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ ।
ವ್ಯಾಘುಟ್ಯ ಮೋಕ್ಷ ಪದವೀಂ ದದಾತಿ ಪುರುಷೋತ್ತಮಃ ।
ಇತಿ ಶ್ರುತಿ ಪ್ರಮಾಣಾನುಸಾರೇಣ ಆಲೌಕಿಕಾರ್ಥಸ್ಯ ಕಲ್ಪ್ಯತ್ವಾದಿತಿ ॥ ಅಣುಭಾಷ್ಯವಿವರಣೆ

ಮೊದಲನೆಯದು ಈಶ್ವರೇಚ್ಛಾರೂಪವಾದುದು. ಎರಡನೆಯದು ಪ್ರಕೃತಿರೂಪವಾದುದು. ಈ ಪ್ರಕೃತಿರೂಪ ಆವರಣವು ಮುಕ್ತಿಯಲ್ಲಿ ಇಲ್ಲವೇ ಇಲ್ಲ. ಮೊದಲನೆಯದು ಇದ್ದೇ ಇರುತ್ತದೆ. ಅದು ಅಪರೋಕ್ಷಜ್ಞಾನವು ಬಂದ ಮೇಲೆ ಪಾಪವನ್ನು ನಿಮಿತ್ತಮಾಡಿ ಆನಂದಾನುಭವವನ್ನು ಪ್ರತಿಬಂಧಿಸುತ್ತದೆ. "ಅಜೇ ದ್ವೇ ಪ್ರಕೃತೀ ದುಷ್ಟೇ" ಎಂದಾಗಿ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು.

ಇದರಿಂದ ಯಾವುದನ್ನು ಮುಕ್ತಿಯಲ್ಲಿ ಅನುಭವಿಸುವನೋ ಅದೇ ಅವನ ಸ್ವರೂಪವೆಂಬ ಮಾತನ್ನು ನಿರಾಕರಿಸಿದಂತೆ ಆಯಿತು. ಸ್ವರೂಪಾಚ್ಛಾದಿಕವನ್ನು (ಜೀವಾಚ್ಛಾದಿಕವನ್ನು) ನಾಶಮಾಡಿ ಪರಮಾಚ್ಛಾದಿಕವನ್ನು ಕುಟ್ಟಿ ಅದರ ಕೆಲಸವಾಗದಂತೆ ಮಾಡಿ ಪುರುಷೋತ್ತಮನಾದ ಭಗವಂತನು ಮೋಕ್ಷ ಪದವಿಯನ್ನು ದಯಪಾಲಿಸುತ್ತಾನೆ. ಈ ಶ್ರುತಿಗೆ ಅನುಸಾರವಾಗಿ. ಮೋಕ್ಷವೆಂಬ ಪ್ರಯೋಜನವು ಲಭಿಸುತ್ತದೆ ಎಂಬುದಾಗಿ ಕಲ್ಪಿಸಬಹುದು.

ಶ್ರೀ ಜಗನ್ನಾಥದಾಸರು ಶ್ರೀಹರಿಕಥಾಮೃತಸಾರದಲ್ಲಿ ಹೀಗೆ ತಿಳಿಸಿಕೊಟ್ಟಿರುವರು-

**ಆರಧಿಕ ದಶಕಳೆಗಳುಳ್ಳ ಶ**
**ರೀರ ಅನಿರುದ್ಧಗಳ ಮಧ್ಯದಿ**
**ಸೇರಿ ಇಪ್ಪವು ಜೀವ ಪರಮಾಚ್ಛಾದಿಕ ದ್ವಯವು ।**
**ಬಾರದಂದದಿ ದಾನವರನತಿ**
**ದೂರಗೈಸುತ ಶ್ರೀಜನಾರ್ದನ**
**ಮೂರುಗುಣದೊಳಗಿಪ್ಪನೆಂದಿಗು ತ್ರಿವೃತುಯೆಂದೆನಿಸಿ ॥** (9-14)

ಹದಿನಾರು ಕಲೆಗಳುಳ್ಳ ಲಿಂಗಶರೀರ ಮತ್ತು ಅನಿರುದ್ಧ ಶರೀರಗಳ ನಡುವೆ ಜೀವಾಚ್ಛಾದಿಕ ಮತ್ತು ಪರಮಾಚ್ಛಾದಿಕ ಎಂಬ ಎರಡು ಆವರಣಗಳು ಇರುತ್ತವೆ. ಲಿಂಗ ಶರೀರಕ್ಕೆ ದೈತ್ಯದಾನವರ ಉಪಟಳವು ತಾಕದಂತೆ ಶ್ರೀಜನಾರ್ದನರೂಪಿ ಹರಿಯು ಶ್ರೀ ಭೂ ದುರ್ಗಾ ಅಂತರ್ಯಾಮಿಯಾಗಿ ಸತ್ವರಜಸ್ತಮೋಗುಣಗಳಲ್ಲಿದ್ದು ಕಾರ್ಯವನ್ನು ನಡೆಸುತ್ತಾನೆ. ನಿಶ್ಚಿತ.

ಶ್ರೀಮದ್‌ಭಾಗವತ ದಶಮಸ್ಕಂಧ ತಾತ್ಪರ್ಯದಲ್ಲಿ ಈ ಎರಡು ಆವರಣಗಳ ಬಗ್ಗೆ ತಿಳಿಸಿಕೊಟ್ಟಿದ್ದಾರೆ.

ಲಕ್ಷ್ಮೀದೇವಿಯು ಪ್ರಕೃತಿ ಶಬ್ದದಿಂದ ಮುಖ್ಯವಾಚ್ಯಳು. ಆ ಲಕ್ಷ್ಮೀದೇವಿಯಿಂದ ಚತುರ್ಮುಖನ ಹೆಂಡತಿಯಾದ ಸರಸ್ವತೀದೇವಿಯೂ, ಆ ಸರಸ್ವತಿಗಿಂತ ಪಾರ್ವತೀ ಶಚೀ ಮೊದಲಾದವರು ಅಮುಖ್ಯತಃ ಪ್ರಕೃತಿ ಶಬ್ದ ವಾಚ್ಯರು. ಹೀಗೆ ಚೇತನ ಪ್ರಕೃತಿಗಳನ್ನು ನಿರೂಪಿಸಿದ ಮೇಲೆ ದುಷ್ಟಗಳಾದ 2 ಪ್ರಕೃತಿಗಳನ್ನು ನಿರೂಪಿಸುವರು. 1. ಸ್ವಗುಣಾಚ್ಛಾದಿಕಾ (ಜೀವಾಚ್ಛಾದಿಕಾ) 2. ಪರಮಾಚ್ಛಾದಿಕಾ ಎಂದು ಎರಡು ಪ್ರಕೃತಿಗಳು ಮನುಷ್ಯರಲ್ಲಿ ಪ್ರತ್ಯೇಕ ಇರುತ್ತವೆ. ಅವುಗಳಲ್ಲಿ ಮೊದಲನೆಯದು ಜೀವರಿಗೆ ತಮ್ಮ ಆನಂದಾದಿಗುಣಗಳ ಜ್ಞಾನಪ್ರತಿಬಂಧಕವು. ಎರಡನೆಯದ್ದು ಜೀವರಿಗೆ ಪರಮಾತ್ಮನ ಜ್ಞಾನ ಪ್ರತಿಬಂಧಕವು. ಶ್ರೀಹರಿಯು ಅನಾದಿಯಿಂದ ಜೀವರಲ್ಲಿರುವ 2 ಪ್ರಕೃತಿಗಳಲ್ಲಿ ಒಂದನೆಯದನ್ನು ಸಂಹರಿಸಿ, ಎರಡನೆಯದನ್ನು ದೂರೀಕರಿಸಿ ಮೋಕ್ಷವನ್ನು ಕೊಡುತ್ತಾನೆ. ಈ 2 ಪ್ರಕೃತಿಗಳು ಶ್ರೀಹರಿಯ ಅನಂತತ್ವವನ್ನು ಮರೆಮಾಡುತ್ತವೆ. ಒಂದು ಶರೀರದಲ್ಲಿ ಪಿಶಾಚಿಯು ಹೇಗೆ ಇರುತ್ತದೋ ಹಾಗೆ ಒಬ್ಬ ಅಧಿಕಾರಿಯಲ್ಲಿ ಎರಡು ಪ್ರಕೃತಿಗಳು ಇರುತ್ತವೆ. ಸುಖ ಸ್ವರೂಪರಾದ ರಮಾ ಮೊದಲಾದ ದೇವಿಯರು ಆ ದುಷ್ಟ ಪ್ರಕೃತಿಗಳಿಗೆ ಪ್ರೇರಕರು ಎಂದು ಮಹಾತತ್ತ್ವವಿವೇಕದಲ್ಲಿ ಹೇಳಿದೆ.[2]



---

2. ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಬ್ರಹ್ಮಾಣೀತ್ವವರಾ ತತಃ । ಉಮಾಶಚೀ ಮುಖಾಸ್ತಸ್ಯಾಃ ಅವರಾಃ ಸಂಪ್ರಕೀರ್ತಿತಾಃ ॥ ಅಥಾನ್ಯೇ ಪ್ರಕೃತೀ ದುಷ್ಟೇ ನೃಷು ಪ್ರಾತಿಸ್ವಿಕಂ ಸ್ಥಿತೇ । ಸ್ವಗುಣಾಚ್ಛಾದಿಕಾತ್ವೇಕಾ ಪರಮಾಚ್ಛಾದಿಕಾ ಪರಾ । ಸ್ವಗುಣಾಚ್ಛಾದಿಕಂ ಹತ್ವಾ ಪರಮಾಚ್ಛಾದಿಕಾಂ ಪರಃ । ವ್ಯಾಘುಟ್ಯಮೋಕ್ಷ ಪದವೀಂ ದದಾತಿ ಪುರುಷೋತ್ತಮಃ । ಅಜೇ ದ್ವೇ ಅಪಿ ತೇ ಪ್ರೋಕ್ತೇ ಅನಂತಾಚ್ಛಾದಿನೀ ಹರೇಃ । ಪಿಶಾಚವತ್ ಸಮುದ್ದಿಷ್ಟೇ ಪುರುಷಸ್ಯಾಧಿಕಾರಿಣಃ । ಪ್ರೇರಕಾಸ್ತು ತಯೋರ್ದೇವ್ಯಃ ಇಂದಿರಾದ್ಯಾಃ ಸುಖಾತ್ಮಿಕಾಃ ಇತಿ ಮಹಾತತ್ವವಿವೇಕೇ ॥

(ಭಾಗವತತಾತ್ಪರ್ಯ 10-94-12)

# ಜೀವನ ಮೂರು ಅವಸ್ಥೆಗಳು

ಜೀವನಿಗೆ ಜಾಗ್ರತ್ (ಎಚ್ಚರ), ಸ್ವಪ್ನ (ಕನಸು), ಸುಷುಪ್ತಿ (ನಿದ್ರೆ) ಎಂಬುದಾಗಿ ಮೂರು ಅವಸ್ಥೆಗಳುಂಟು. ಎಚ್ಚರದಲ್ಲಿ ಜೀವನಸ್ಥಾನವು ಬಲಗಣ್ಣು, ಕನಸಿನಲ್ಲಿ ಜೀವನ ಸ್ಥಾನವು ಕಂಠದೇಶ, ನಿದ್ರಾವಸ್ಥೆಯಲ್ಲಿ ಜೀವನ ಸ್ಥಾನವು ಹೃದಯ-ವೆಂಬುದಾಗಿ ತಿಳಿಯಬೇಕು.

''ಹೃದಿ ಏಷ ಆತ್ಮಾ'' ಉಕ್ತಿಯಂತೆ ಜೀವನ ಸ್ಥಿರವಾದ ನೆಲೆ ಹೃದಯ ಮಾತ್ರ. ಎಚ್ಚರದಲ್ಲಿದ್ದಾಗ ಕಣ್ಣಿನಲ್ಲಿ ಅವನ ರೂಪ ಇರುತ್ತದೆಯೆಂದು ಬೃಹದಾರಣ್ಯ-ಕೋಪನಿಷತ್ತಿನ ಭಾಷ್ಯದಲ್ಲಿ ಆಚಾರ್ಯರು ತಿಳಿಸಿದ್ದಾರೆ.

**ಹೃದಯೇ ಸಂಸ್ಥಿತೋ ಜೀವಃ ವಿಶೇಷೇಣ ಹರಿಸ್ತಥಾ।**
**ಚಕ್ಷುರಾದಿಷು ರೂಪಾಣಿ ಜಾಗ್ರತ್ಕಾಲೇ ತಯೋಃ ಸದಾ ॥**

ಇದರಿಂದ ಎಲ್ಲ ಜೀವರಿಗೂ ಅಂಶಭೇದ ಇದೆ ಎಂದು ಹೇಳಿದಂತೆ ಭಾಸವಾಗುತ್ತದೆ. ಆದರೆ ಐತರೇಯ ಭಾಷ್ಯದಲ್ಲಿ ಇದರ ಸ್ಪಷ್ಟೀಕರಣವನ್ನು ಆಚಾರ್ಯರೇ ಮಾಡಿದ್ದಾರೆ.

**ನ ಜೀವಸ್ಯ ಅಕ್ಷಿಣೀ ಪೃಥಕ್ ಶಿರೋ ಬಾಹ್ವಾದಿಕಂ ವಿದ್ಯತೇ ।**
**ಹೃದಿಸ್ಥಿತಮೇವ ಹಿ ತಸ್ಯ ರೂಪಂ ಜಾಗರಿತೇಽಪಿ ಅಕ್ಷ್ಯಾದಿಷು**
**ವಿಶೇಷ ಸನ್ನಿಹಿತಂ ಭವತಿ । ಪ್ರದೀಪ ಪ್ರಭಾವತ್ ॥**

ಹೃದಯವೇ ಜೀವನ ಆವಾಸಸ್ಥಾನ. ಎಚ್ಚರದಲ್ಲಿದ್ದಾಗ ಕಣ್ಣಿನಲ್ಲಿ ಅವನ ಪ್ರಕಾಶ ವಿಶೇಷವು ಇರುತ್ತದೆ. ಅದಕ್ಕೆ ತಲೆ, ಕಾಲು ಮುಂತಾದ ಅವಯವಗಳು ಇರುವುದಿಲ್ಲ. ಹೃದಿಸ್ಥರೂಪಕ್ಕೆ ಮಾತ್ರತಲೆ ಮುಂತಾದ ಅವಯವಗಳು ಇರುತ್ತವೆ.

1. ಜಾಗ್ರದವಸ್ಥೆ - ದೇಹಾಭಿಮಾನದಿಂದ ಸಹಿತವಾದ ಸ್ಥಿತಿರೂಪ ಅಂದರೆ ಇರುವಿಕೆಯು ಜಾಗ್ರದವಸ್ಥೆಯು.[1] ವಿಶ್ವರೂಪೀ ಭಗವಂತನು ಈ ಜಾಗ್ರದವಸ್ಥೆಯನ್ನು ಜೀವನಿಗೆ ತಂದುಕೊಡುತ್ತಾನೆ.

---

1. ಓಂ ದೇಹಯೋಗಾದ್ವಾ ಸೋಽಪಿ ಓಂ ॥ ಬ್ರಹ್ಮಸೂತ್ರ (3-2-6)

2. ಸ್ವಪ್ನಾವಸ್ಥೆ – ಸರ್ವೇಶ್ವರನಾದ ಶ್ರೀಹರಿಯು ಜೀವರ ಸಮುದಾಯಕ್ಕೆ ತನ್ನ ಇಚ್ಛೆಯಿಂದ ಜೀವ ಮನೋಗತಗಳಾದ ವಾಸನೋಪಾದಾನಕ ಪದಾರ್ಥಗಳನ್ನೇ ತೋರಿಸುತ್ತಾನೆ. ಅದೇ ಸ್ವಪ್ನಾವಸ್ಥೆಯೆಂದು ಹೇಳಿಸಿಕೊಳ್ಳುತ್ತದೆ.[2] ಸ್ವಪ್ನಗಳು ಶುಭಾಶುಭ ಸೂಚಕವಾಗಿವೆ.

3. ಸುಷುಪ್ತಿ ಅವಸ್ಥೆ – ಸ್ವಪ್ನ ಮತ್ತು ಎಚ್ಚರ ಇವುಗಳ ಇಲ್ಲದಿರುವಿಕೆಯು ಜೀವನ ಗಾಢ ನಿದ್ರೆಯು. ಅದು ಭಗವಂತನು ಸುಷುಮ್ನಾ ನಾಡಿಯಲ್ಲಿ ಇರಲು ಆಗುತ್ತದೆ. ಇದನ್ನೇ ಛಾಂದೋಗ್ಯ ಶ್ರುತಿಯಲ್ಲಿ ಹೇಳಿದ್ದಾರೆ. ಯಾವಾಗ ಈ ಸುಷುಮ್ನಾನಾಡಿಯಲ್ಲಿ ಶ್ರೀಹರಿಯು ಪ್ರವೇಶಿಸುವನೋ ಆಗ ಜೀವನು ಗಾಢ ನಿದ್ರೆಯನ್ನು ಹೊಂದುತ್ತಾನೆ. ಆಗ ಸತ್ಯಶಬ್ದವಾಚ್ಯನಾದ ಭಗವಂತನಿಂದ ಕೂಡಿದವನಾಗುತ್ತಾನೆ.[3] ಪ್ರಾಜ್ಞೇನ ಆತ್ಮನಾ ಸಂಪರಿಷ್ವಕ್ತಃ'' ಎಂದಾಗಿ ಹೇಳಿರುವುದರಿಂದ ಗಾಢ ನಿದ್ರಾವಸ್ಥೆಯನ್ನು ಭಗವಂತನೇ ಹೊಂದಿಸುತ್ತಾನೆ.

ಹೀಗೆ ಜೀವನ ಮೂರೂ ಅವಸ್ಥೆಗಳಿಗೆ ಪರಮಾತ್ಮನೇ ಪ್ರೇರಕನು ಎಂದು ತಿಳಿಯುವದು ಅವಶ್ಯವಾಗಿದೆ.[4]



2. ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ।
ಪ್ರದರ್ಶಯತಿ ಜೀವಾಯ ಸಸ್ವಪ್ನ ಇತಿ ಗೀಯತೇ ॥ (3-2-3) ಭಾಷ್ಯದಲ್ಲಿ ಬ್ರಹ್ಮಾಂಡವಚನ

3. ಜಾಗ್ರತ್ ಸ್ವಪ್ನಾಭಾವಃ ಸುಪ್ತಿಃ ನಾಡೀಸ್ಥೇ ಪರಮಾತ್ಮನಿ ।
ಆಸುತದಾ ನಾಡೀಷು ಸುಪ್ತೋ ಭವತಿ ।
ಸತಾಸೋಮ್ಯತದಾ ಸಂಪನ್ನೋಭವತಿ । ಇತಿ ಶ್ರುತೇಃ ॥

4. ಸರ್ವಾವಸ್ಥಾಪ್ರೇರಕಶ್ಚ – ಅಣುಭಾಷ್ಯ

# ಜೀವನ ಮೂರುವಿಧ ತಾಪಗಳು ಮತ್ತು ಪರಿಹಾರ

"ತಪ್ಯಮಾನಾಸ್ತ್ರಿಧಾ ತಾಪೈಃ ಸರ್ವೇ ಜೀವಗಣಾಃ ಸದಾ" ಶ್ರೀವಿಷ್ಣುರಹಸ್ಯದ ಉಕ್ತಿಯಂತೆ ಸಂಸಾರದಲ್ಲಿ ಎಲ್ಲ ಜೀವರಾಶಿಗಳು ಮೂರು ವಿಧವಾದ ತಾಪಗಳಿಂದ ಬಳಲುತ್ತಿರುವುದು ಕಂಡು ಬರುತ್ತದೆ.

"ತಾಪೋ ಹಿ ಪ್ರೋಚ್ಯತೇ ದುಃಖಂ ತತ್ತುಸ್ಯಾತ್ ತ್ರಿವಿಧಂ" ಉಕ್ತಿಯಂತೆ ತಾಪವೆಂದರೆ ದುಃಖವೆಂದು ಅರ್ಥವಾಗುತ್ತದೆ. ಅದು ಆಧಿದೈವಿಕ, ಆಧಿಭೌತಿಕ, ಮತ್ತು ಆಧ್ಯಾತ್ಮಿಕಗಳೆಂದು ಮೂರು ವಿಧವಾಗಿದೆ.[1]

## 1. ಆಧಿದೈವಿಕ

ಪ್ರತ್ಯಕ್ಷ ತೋರುವ ಯಾವ ಕಾರಣವೂ ಇಲ್ಲದೇ ಕೇವಲ ದೈವಯೋಗದಿಂದ ಅದೃಷ್ಟನಿಯಾಮಕನಾದ ಶ್ರೀಹರಿಯಿಂದ ಕರ್ಮಾನುಸಾರವಾಗಿ ವ್ಯಕ್ತಿಗಳಿಗೂ, ಪ್ರಜಾ ಸಮುದಾಯಗಳಿಗೂ ಪ್ರಾಪ್ತವಾಗುವ, ಮೃತ್ಯುವಿನಿಂದಲೂ, ಜಗತ್ತಿನಲ್ಲಿ ಸಾಮಾನ್ಯವಾಗಿ ಆಗಾಗ ಸಂಭವಿಸುವ ಬಿರುಗಾಳಿ, ಮಹಾವೃಷ್ಟಿ, ದುರ್ಭಿಕ್ಷೆ ಮಾರಕ ಅಗ್ನಿ, ಪ್ರಾಣಿಗಳಿಗೆ ಒದಗುವ ನಾನಾರೋಗಾದಿ ಉಪದ್ರವಗಳು ಇತ್ಯಾದಿಗಳಿಂದ ಉಂಟಾಗುವ ದುಃಖವು ಆಧಿದೈವಿಕತಾಪವೆನಿಸುತ್ತದೆ.[2]

## 2. ಆಧಿಭೌತಿಕ

ಪೃಥ್ವೀ, ಅಪ್, ತೇಜ, ವಾಯು, ಆಕಾಶ ಹಾಗೂ ಪ್ರಾಣಿಗಳು ಭೂತಗಳೆಂದು ಕರೆಯಲ್ಪಡುತ್ತವೆ. ಭೂತಗಳಿಂದ ಮತ್ತು ಸರ್ಪ, ಹುಲಿ, ವರಾಹ, ಮೊದಲಾದ ಪ್ರಾಣಿಗಳಿಂದ ಅಥವಾ ಕಳ್ಳ ರಾಜ ಮೊದಲಾದವರಿಂದ, ತನಗೇ ಆಗಲಿ, ತನಗೆ ಪ್ರಿಯರಾದ ಪುತ್ರಾದಿಗಳಿಗಾಗಲಿ ಉಂಟಾಗುವ ಹಿಂಸೆಯಿಂದ ತನ್ನ ಭೌತಿಕ ದೇಹದಲ್ಲಿ ಉಂಟಾಗುವ ದುಃಖವು ಆಧಿಭೌತಿಕ ತಾಪವು – ತನ್ನ ಭೌತಿಕ ದೇಹದಲ್ಲಿ

---

1. ಆಧ್ಯಾತ್ಮಿಕಂ ಚಾಧಿಭೂತಮಾಧಿದೈವಿಕಮೇವಚ ॥ ಶ್ರೀವಿಷ್ಣು ರಹಸ್ಯ

2. ದೃಷ್ಟ ಕಾರಣಹೀನಂ ಯಜ್ಜಾಯತೇ ದೈವಯೋಗತಃ ।
ಅಕಸ್ಮಾನ್ಮರಣಾದ್ಯಚ್ಚ ಮಹಾಮಾರುತ ವೃಷ್ಟಯಃ ॥
ದುರ್ಭಿಕ್ಷಂ ಮಾರಕವಹ್ನಿ ವ್ಯಾಧಾದ್ಯಾ ಈತಯಸ್ತು ಯಾಃ ।
ಬಹು ಸಾಧಾರಣಾಲೋಕೇ ದೃಶ್ಯಂತೇ ಜಂತುಪೀಡಕಾಃ ॥
ತೇಭ್ಯೋ ಯಜ್ಜಾಯತೇ ದುಃಖಮಾಧಿದೈವಿಕಮೇವ ತತ್ ॥ ಶ್ರೀವಿಷ್ಣುರಹಸ್ಯ.

ಸಂಭವಿಸುವ ಸಿಡಿತ, ಬಿಕ್ಕು, ಉಬ್ಬಸ, ಜ್ವರಾದಿಗಳಿಂದ ಆಗುವ ಪರಿಪರಿಯ ತೀವ್ರ ದುಃಖಗಳೂ ಆಧಿಭೌತಿಕ ತಾಪಗಳೆನಿಸುತ್ತವೆ. ಈ ವಿಧ ದುಃಖಗಳು ಸಮಸ್ತ ಪ್ರಾಣಿಗಳಲ್ಲಿ ಕಂಡು ಬರುತ್ತವೆ.[3]

### 3. ಆಧ್ಯಾತ್ಮಿಕ

ಮನಸ್ಸು ಆತ್ಮವೆಂದು ಹೇಳಲ್ಪಡುತ್ತದೆ. ಆ ಮನಸ್ಸಿಗೆ ನಾನಾ ಅಪರಾಧಗಳಿಂದ ಕಾಲವಿಶೇಷಗಳಲ್ಲಿ ಪರಿಪರಿಯ ದುಃಖಗಳುಂಟಾಗುತ್ತವೆ. ಪಾಪಕರ್ಮಗಳ ಫಲವಾಗಿ ತನಗೆ ಪ್ರಿಯವಾದ ಧನ, ಪುತ್ರ, ಗೃಹ, ಕ್ಷೇತ್ರ, ಭಾರ್ಯಾದಿಗಳಿಗೆ ನಾಶವಾಗಲೀ, ಅನಿಷ್ಟವಾಗಲೀ ಉಂಟಾಗಿ ಅತಿ ಚಿಂತೆಯಿಂದ ಮನಸ್ಸಿಗೆ ತಾಪ ಉಂಟಾಗುತ್ತದೆ. ಅನ್ಯರ ವಿಷಯದಲ್ಲಿ ಅಸೂಯೆ ಪಡುವುದರಿಂದಲೂ,ರಾಗದ್ವೇಷರೂಪದ ಅಭಿಮಾನ ದಿಂದಲೂ, ದುಃಸ್ವಪ್ನದಿಂದ ವ್ಯರ್ಥವಾದ ಭಯಾದಿಗಳಿಂದಲೂ, ಸುಖದಿಂದಿದ್ದವನಿಗೆ ಸಹ ಯಾವ ದುಃಖ ಉಂಟಾಗುವದೋ ಇವೆಲ್ಲವೂ ಆಧ್ಯಾತ್ಮಿಕ ತಾಪವೆನಿಸುತ್ತವೆ.[4]

### ತಾಪತ್ರಯಗಳಿಗೆ ಪರಿಹಾರ

ಯಾರನ್ನು ಆಶ್ರಯಿಸುವುದರಿಂದ ಈ ತಾಪತ್ರಯಗಳಿಂದ ಬಿಡುಗಡೆ ಯಾಗುವುದೋ, ಆತನನ್ನೇ ಶರಣು ಹೊಂದಬೇಕು. ತಪ್ಪದೇ ರಕ್ಷಿಸುತ್ತಾನೆಂಬ ದೃಢವಾದ ನಂಬಿಕೆಯೂ, ತಾನು ಸರ್ವದಾ ಆತನ ಭೃತ್ಯನೇ ಎಂಬ ನಿರಂತರ ಭಾವನೆಯೂ ಶರಣಾಗತಿ ಎನಿಸುತ್ತದೆ. ಈ ರೂಪದ ಶರಣಾಗತಿಯನ್ನು ಶ್ರೀವಿಷ್ಣುವಿನಲ್ಲಿ

---

3. ಭೂತಾನಿ ಪ್ರಾಣಿನಃ ಪ್ರೋಕ್ತಾಸ್ತಥಾಕಾಶಾದಿ ಪಂಚಕಂ ।
ಸರ್ಪವ್ಯಾಘ್ರ ವರಾಹಾದೇಸ್ತಸ್ಕರಾದೇರ್ನೃಪಾದಪಿ ॥
ಸ್ವದೇಹೇ ಸ್ವಪ್ರಿಯಸ್ಯಾಪಿ ಪುತ್ರಾದೇಃ ಪೀಡನಾದ್ಭವೇತ್ ।
ದುಃಖಂ ತಥೈವ ವಿಸ್ಫೋಟಹಿಕ್ಕಾಕಾ ಸಜ್ವರಾದಿನಾ ॥
ಭೌತಿಕೇಷ್ವಿಹ ದೇಹೇಷು ಜಾಯತೇ ದುಃಖಮುಲ್ಬಣಂ ।
ತದಾಧಿಭೌತಿಕಂ ನಾಮ ದೃಶ್ಯತೇಽಖಿಲ ಜಂತುಷು ॥ ಶ್ರೀವಿಷ್ಣುರಹಸ್ಯ

4. ಆತ್ಮಾ ಮನಸ್ತು ತಸ್ಯೈವ ಜಾತಂ ಯದಪರಾಧತಃ ।
ಧನಪುತ್ರ ಗೃಹಕ್ಷೇತ್ರ ಕಲತ್ರಾದೇಃ ಪ್ರಿಯಸ್ಯ ಯತ್ ॥
ವಿಘಾತಾದೇಸ್ತಥಾನಿಷ್ಟ ಪ್ರಾಪ್ತೇಶ್ಚಾ ಪ್ಯತಿಚಿಂತಯಾ ।
ಅಸೂಯಯಾಭಿಮಾನೇನ ದುಃಸ್ವಪ್ನಾಚ್ಚ ವೃಥಾ ಭಯಾತ್ ॥
ಸ್ವಸ್ಥಸ್ಯಾಪಿ ಹಿ ಯದ್ದುಃಖಂ ತದಾಧ್ಯಾತ್ಮಿಕಮುಚ್ಯತೇ ॥ ಶ್ರೀವಿಷ್ಣುರಹಸ್ಯ

ಹೊಂದಿದರೆ ಅದು ಪರಮಪುರುಷಾರ್ಥವಾದ (ನಿತ್ಯಾನಂದ ಸ್ಥಿತಿರೂಪದ) ಮೋಕ್ಷವನ್ನು ದೊರಕಿಸಿಕೊಡುತ್ತದೆ.[5]

ಶ್ರೀಮದಾನಂದತೀರ್ಥಭಗವತ್ಪಾದರು ತಮ್ಮ ಶ್ರೀಕೃಷ್ಣಾಮೃತಮಹಾರ್ಣವ ಗ್ರಂಥದ ದ್ವಿತೀಯ ಶ್ಲೋಕದಲ್ಲಿ ತಿಳಿಸಿರುವುದು ಗಮನಾರ್ಹವಾಗಿದೆ.

**ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಂ ॥**

ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪತ್ರಯಗಳಿಂದ ಈ ಸಮಸ್ತ ಪ್ರಪಂಚವು ಬಳಲುತ್ತಿದೆ. ಈ ತಾಪತ್ರಯ ನಿವೃತ್ತಿಗಾಗಿ, ಅಪೂರ್ವ ಸುಖ ಪ್ರಾಪ್ತಿಗಾಗಿ ''ಕೃಷ್ಣ''ನೆಂಬ ತಾಪತ್ರಯ ಪರಿಹಾರಕವಾದ, ಅಮೃತ ಪನ್ನೀಯುವ ಸಮುದ್ರದಂತಿರುವ ''ಕೃಷ್ಣಾಮೃತ ಮಹಾರ್ಣವ '' ಗ್ರಂಥವನ್ನು ರಚಿಸಿಕೊಟ್ಟು ಮಹದುಪಕಾರ ಮಾಡಿದ್ದಾರೆ.

ಇಂಥ' ಶ್ರೀಕೃಷ್ಣಾಮೃತಮಹಾರ್ಣವ' ಗ್ರಂಥವನ್ನು ಸರ್ವರೂ ಸೇವಿಸಿ ತಾಪತ್ರಯ ಗಳಿಂದ ಪರಿಹಾರವನ್ನು ಹೊಂದಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.



5. ಯೇನಸ್ಯುಸ್ತತ ಏತೇಭ್ಯೋ ಮುಕ್ತ್ಯೈ ತಂ ಶರಣಂ ವ್ರಜೇತ್ ।
ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ॥
ಶರಣಾಗತಿರೇಷಾ ಸ್ಯಾದ್ವಿಷ್ಣೌರ್ಮೋಕ್ಷ ಫಲಪ್ರದಾ ॥ ಶ್ರೀವಿಷ್ಣುರಹಸ್ಯ.

# ಜೀವನು ಆಚರಿಸಲೇಬೇಕಾದ ಮೂರುವಿಧ ತಪಸ್ಸುಗಳು

ದೇಹದಿಂದ, ಮಾತಿನಿಂದ, ಮನಸ್ಸಿನಿಂದ ಪ್ರತಿಯೊಬ್ಬ ಜೀವನು ಮೂರು ವಿಧ ತಪಸ್ಸಗಳನ್ನು ಆಚರಿಸಲೇಬೇಕು. ಇವುಗಳ ವಿವರಣೆ ಇಲ್ಲಿದೆ.

ದೇವತೆಗಳು, ಬ್ರಾಹ್ಮಣರು, ಗುರುಗಳು, ಜ್ಞಾನಿಗಳು ಇವರ ಪೂಜೆ, ಬಾಹ್ಯ ಹಾಗೂ ಆಂತರಿಕ ಶುದ್ಧಿ, ಪ್ರಾಮಾಣಿಕತೆ, ಬ್ರಹ್ಮಚರ್ಯ ಮತ್ತು ಪ್ರಾಣಿಹಿಂಸೆ ಮಾಡದಿರುವುದು ಇವೆಲ್ಲವೂ ಶಾರೀರಿಕ (ದೈಹಿಕ) ತಪಸ್ಸು ಎನಿಸುತ್ತವೆ.[1]

ಇಲ್ಲಿ ಹೇಳಲ್ಪಟ್ಟಿರುವ ದೇವ, ದ್ವಿಜ, ಗುರು ಮತ್ತು ಜ್ಞಾನಿಗಳ ಪೂಜೆಯು ಎಲ್ಲರಲ್ಲಿ ಸಮಾನವಾಗಿರಕೂಡದು. ಅದು ತಾರತಮ್ಯಕ್ಕನುಗುಣವಾಗಿರಬೇಕು.

ಶ್ರೀಕೃಷ್ಣಾಮೃತಮಹಾರ್ಣವದಲ್ಲಿ ಶ್ರೀಮದಾಚಾರ್ಯರು ಹೇಳಿರುವ ಮಾತನ್ನು ಗಮನದಲ್ಲಿಟ್ಟಿರಬೇಕು.

**ಸಮಾನಾಂ ವಿಷಮಾಪೂಜಾ ವಿಷಮಾನಾಂ ಸಮಾತಥಾ ।**
**ಕ್ರಿಯತೇ ಯೇನ ದೇವೋऽಪಿ ಸ್ವಪದಾತ್ ಭ್ರಶ್ಯತೇ ಹಿ ಸಃ ॥**

ಜ್ಞಾನ, ಭಕ್ತಿ, ವೈರಾಗ್ಯಾದಿಗುಣಗಳಿಂದ ಸಮಾನರಾದ ಜ್ಞಾನಿಗಳ ಪೂಜೆಯನ್ನು ತಾರತಮ್ಯದಿಂದ ಮಾಡಬಾರದು. ಜ್ಞಾನ, ಭಕ್ತಿ, ಸದಾಚಾರಗುಣಗಳಿಂದ ತಾರತಮ್ಯವನ್ನು ಹೊಂದಿರುವವರ ಪೂಜೆಯನ್ನು ಸಮಾನವಾಗಿ ಮಾಡಬಾರದು.

ಇತರರಿಗೆ ನೋವನ್ನುಂಟುಮಾಡದ, ಸತ್ಯವು, ಪ್ರಿಯವು, ಹಿತವೂ ಆದ ಮಾತು ಮತ್ತು ವೇದಾಧ್ಯಯನ, ಮನನ, ಇವೆಲ್ಲವೂ ವಾಗಿಂದ್ರಿಯದಿಂದ ಮಾಡುವ ತಪಸ್ಸು ಎನಿಸುತ್ತವೆ.[2]

ವಿಷಯಪದಾರ್ಥಗಳಲ್ಲಿ ಪ್ರಯಾಸವಿಲ್ಲದೇ ಪ್ರವೃತ್ತಿಇಲ್ಲದಿರುವಿಕೆ, ಕ್ರೌರ್ಯವಿಲ್ಲ-ದಿರುವಿಕೆ, ಮನನ ಶೀಲತೆ, ಮನಸ್ಸಿನ ಹತೋಟಿ, ಮನಸ್ಸನ್ನು ಪರಮಾತ್ಮನಲ್ಲಿ ಇರಿಸುವದು, ಅಂತಃಕರಣಶುದ್ಧಿ ಇವೆಲ್ಲವೂ ಮಾನಸಿಕ ತಪಸ್ಸು ಎನಿಸುತ್ತವೆ.[3]

---

1. ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ಭಗವದ್ಗೀತಾ (17-14)
2. ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ „ (17-15)
3. ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ „ (17-16)

ತಪಸ್ಸು ಮೂರು ವಿಧವಾಗಿದೆ. ಉತ್ತಮ ಶ್ರದ್ಧೆಯಿಂದ, ಫಲವನ್ನು ಬಯಸದೇ ಭಗವಂತ ಪ್ರೀತನಾಗಲಿ ಎಂಬ ಅನುಸಂಧಾನದಿಂದ ಮಾಡುವ ತಪಸ್ಸು ಸಾತ್ವಿಕವೆನಿಸಿದೆ.[4]

ಸಮಾಜದಲ್ಲಿ ಗೌರವ, ಪ್ರಶಂಸೆ, ಆದರವನ್ನು ಗಳಿಸಬೇಕೆಂಬ ದುರಾಸೆಯಿಂದ ಕಪಟತನದಿಂದ ಮಾಡುವ ತಪಸ್ಸು ರಾಜಸವೆನಿಸುತ್ತದೆ, ಇದು ಅಶಾಶ್ವತವಾದುದು.[5]

ಅವಿವೇಕದಿಂದ ಉಂಟಾದ ದುರಾಗ್ರಹದಿಂದ ಅಥವಾ ತನಗೆ ತಾನೇ ಹಿಂಸೆಯನ್ನು ಮಾಡಿಕೊಳ್ಳುವ ಮೂಲಕ ಶತ್ರುನಾಶಕ್ಕಾಗಿ ಮಾಡುವ ತಪಸ್ಸು ತಾಮಸವೆನಿಸುತ್ತದೆ.[6]



4. ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ವಿಕಂ ಪರಿಚಕ್ಷತೇ ॥ ಭಗವದ್ಗೀತಾ (17-17)

5. ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ,, (17-18)

6. ಮೂಢಗ್ರಾಹೇಣಾऽತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ,, (17-19)

# ಜೀವನ ನಾಲ್ಕು ಶರೀರಗಳು (ದೇಹಗಳು)

ಜೀವನಿಗೆ ಸ್ವರೂಪಶರೀರ, ಲಿಂಗಶರೀರ, ಅನಿರುದ್ಧಶರೀರ, ಸ್ಥೂಲಶರೀರ ಎಂಬುದಾಗಿ ನಾಲ್ಕು ಶರೀರಗಳುಂಟು. ಈ ನಾಲ್ಕು ಶರೀರಗಳಲ್ಲಿ ನಾರಾಯಣನು ಹೃದಯಕಮಲಮಧ್ಯಸಿಂಹಾಸನದಲ್ಲಿ 1. ಸ್ಥೂಲಶರೀರದಲ್ಲಿ ಅನಿರುದ್ಧನಾಮಕ ಭಗವಂತನು, 2. ಅನಿರುದ್ಧಶರೀರದಲ್ಲಿ ಪ್ರದ್ಯುಮ್ನನಾಮಕ ಭಗವಂತನು, 3. ಲಿಂಗ ಶರೀರದಲ್ಲಿ ಸಂಕರ್ಷಣನಾಮಕ ಭಗವಂತನು, 4. ಸ್ವರೂಪಶರೀರದಲ್ಲಿ ವಾಸುದೇವ ನಾಮಕ ಭಗವಂತನು ಶೋಭಿಸುತ್ತಾನೆ.[1]

ಜೀವನ ಸ್ವರೂಪಶರೀರ, ಲಿಂಗ ಶರೀರ, ಅನಿರುದ್ಧಶರೀರ, ಸ್ಥೂಲಶರೀರಗಳಲ್ಲಿ ಕ್ರಮವಾಗಿ ವಿಶ್ವ, ಹಯವದನ, ಮೂಲೇಶ, ಅಂದರೆ ವಿಷ್ಣು ಅಚ್ಯುತಾನಂತಗೋವಿಂದ ಹಂಸ, ಈ ಪ್ರಕಾರ ನಾಲ್ಕು ಶರೀರಗಳಲ್ಲಿ, ಚತುಃಸ್ಥಾನ ಅಂದರೆ ನೇತ್ರ, ಕಂಠ, ಹೃದಯ ಶಿರಸ್ಸಿನ ಮೇಲೆ ಶಾಂತಿಪತಿಯಾದ ಅನಿರುದ್ಧನ-

ಅನಿರುದ್ಧ - ಪ್ರದ್ಯುಮ್ನ ಅನಿರುದ್ಧ - ಸಂಕರ್ಷಣ,
ಅನಿರುದ್ಧ - ವಾಸುದೇವ ಅನಿರುದ್ಧ - ನಾರಾಯಣ, ಮತ್ತು

ಈ ಅನಿರುದ್ಧನ ಅಂಶವೇ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ ಅಂತರಾತ್ಮ ಪರಮಾತ್ಮ, ಜ್ಞಾನಾತ್ಮ, ಹೀಗೆ ಒಟ್ಟು 12 ಹಾಗೂ ಮೇಲೆ ತಿಳಿಸಿದ ವಿಶ್ವ, ಹಯವದನ, ವಿಷ್ಣು ಅಚ್ಯುತ, ಅನಂತ, ಗೋವಿಂದ, ಹಂಸ ಇವೆಲ್ಲವುಗಳನ್ನು ಸೇರಿಸಿದರೆ 19 ಆಗುತ್ತದೆ. ಕಾರಣ ಅನಿರುದ್ಧನಾದ ವಿಶ್ವನ 19 ರೂಪಗಳನ್ನು ಸರ್ವತ್ರ ನಾಲ್ಕು ದೇಹಗಳಲ್ಲಿ 19-19 ರೂಪಗಳನ್ನು ಚಿಂತಿಸಬೇಕು.[2]

---

1. ತನುಚತುಷ್ಟಯಗಳೊಳು ನಾರಾ
ಯಣನು ಹೃತ್ಕಮಲಾಖ್ಯಸಿಂಹಾ
ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತ ॥ ಶ್ರೀಹ.ಕ.ಸಾರ (3-7)

2. ಜೀವಲಿಂಗನಿರುದ್ಧ ಸ್ಥೂಲ ಕ
ಳೇವರಗಳಲಿ ವಿಶ್ವ ತುರಗ
ಗ್ರೀವ ಮೂಲೇಶಾಚ್ಯುತತ್ರಯ ಹಂಸ ಮೂರ್ತಿಗಳ ।
ಈ ವಿಧ ಚತುಃಸ್ಥಾನದಲಿ ಶಾಂ
ತೀವರನ ಈರೆರಡು ರೂಪವಿ
ಭಾವಿಸುವದೇಕೋನವಿಂಶತಿ ಮೂರ್ತಿ ಸರ್ವತ್ರ ॥ ಶ್ರೀ ಹ.ಕ. ಸಾರ (7-3)

ಈ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಗಳೆಂಬ ನಾಲ್ಕು ಶರೀರಗಳಲ್ಲಿ ಮತ್ತು ಅನ್ನಮಯಾದಿ ಕೋಶಗಳಲ್ಲಿ, ತ್ವಕ್ ಚರ್ಮಾದಿ ಏಳು ಧಾತುಗಳಲ್ಲಿರುವ ಭಾರತೀಪತಿಗಳಾದ ಶ್ರೀ ವಾಯುದೇವರು ಒಂದು ದಿನದಲ್ಲಿ 21,600 ಶ್ವಾಸರೂಪ ಹಂಸಮಂತ್ರ ಜಪವನ್ನು ಸೂರ್ಯ ಚಂದ್ರರೊಳಗೆ ತಾವಿದ್ದು ಮಾಡುತ್ತಾರಲ್ಲದೇ, ಈ ಬ್ರಹ್ಮಾಂಡದಲ್ಲಿ ಎಲ್ಲಕಡೆ ತುಂಬಿಕೊಂಡು ಇರುವರು.[3]

ಇದರಿಂದ ಶ್ರೀ ವಾಯುದೇವರು ಪ್ರತಿಯೊಬ್ಬ ಜೀವನ ದೇಹದಲ್ಲಿದ್ದುಕೊಂಡು ದಿನಕ್ಕೆ 86,400 ಶ್ವಾಸಜಪಗಳನ್ನು ಮಾಡುವರೆಂಬುದನ್ನು ತಿಳಿಯುವದು ಅವಶ್ಯ.

ಇದನ್ನೇ ಶ್ರೀ ಜಗನ್ನಾಥದಾಸರು ಶ್ರೀಹರಿಕಥಾಮೃತಸಾರದಲ್ಲಿ ಚೆನ್ನಾಗಿ ತಿಳಿಸಿಕೊಟ್ಟಿದ್ದಾರೆ.

ಸ್ವರೂಪಶರೀರ, ಲಿಂಗಶರೀರ, ಅನಿರುದ್ಧಶರೀರ, ಸ್ಥೂಲಶರೀರ, ಹೀಗೆ ಜೀವರ ನಾಲ್ಕು ಶರೀರಗಳಲ್ಲಿದ್ದು ಶ್ರೀ ವಾಯುದೇವರು 86,400 ಶ್ವಾಸರೂಪವಾದ ಹಂಸ ಮಂತ್ರಜಪಗಳನ್ನು ಮಾಡುತ್ತಾರೆಂಬ ಜ್ಞಾನದಿಂದ ಮನುಷ್ಯರಿಗೆ ಯೋಗ್ಯ ಫಲದೊರಕುತ್ತದೆ. ಶ್ರೀ ವಾಯುದೇವರು ಒಂದು ದಿನದಲ್ಲಿ ಇಷ್ಟು ಜಪಗಳನ್ನು ತ್ರಿವಿಧ ಜೀವರಲ್ಲಿ ಅವರವರ ಯೋಗ್ಯತೆಯಂತೆ (ಭೂ, ಅಭೂ, ಭೂರಭೂ) ಮಾಡುತ್ತಾರೆ. ಅವರಲ್ಲಿ ಖರನಾಮಕ ದೈತ್ಯನನ್ನು ಸಂಹರಿಸಿದ ಶ್ರೀಹರಿಯ ಅನುಗ್ರಹವು ಎಷ್ಟಿರುವದೆಂದು ಹೇಳಲು ಸಾಧ್ಯವಿಲ್ಲ.[4]



3. ಈ ಶರೀರ ಚತುಷ್ಟಯಗಳೊಳು
ಕೋಶ ಧಾತುಗ ಭಾರತಿಪ ಪ್ರಾ
ಣೇಶ ಇಪ್ಪತ್ತೊಂದು ಸಾವಿರದಾರುನೂರೆನಿಪ ।
ಶ್ವಾಸರೂಪಕ ಹಂಸ ಭಾಸ್ಕರ
ಭೇಶರೊಳಗಿದ್ದವರ ಕೈವಿಡಿ
ದೀ ಸರೋಜ ಭವಾಂಡದೊಳು ಸರ್ವತ್ರ ತುಂಬಿಹನು ॥ ಶ್ರೀ ಹ.ಕ. ಸಾರ (7-5)

4. ಈರೆರಡು ದೇಹಗಳೊಳಗಿದ್ದು ಸ
ಮೀರದೇವನು ಶ್ವಾಸ ಜಪ ನಾ
ನೂರಧಿಕವಾಗಿಪ್ಪಯೆಂಭತ್ತಾರು ಸಾಹಸ್ರ ।
ತಾರಚಿಸುವನು ದಿವಸವೊಂದಕೆ
ಮೂರು ವಿಧ ಜೀವರೊಳಗಿದ್ದು ಖ
ರಾರಿ ಕರುಣಾ ಬಲವದೆಂತುಟೊ ಪವನರಾಯನೊಳು । ಶ್ರೀ ಹ.ಕ. ಸಾರ (12-44)

# ಜೀವರ ತಾರತಮ್ಯ

ಬ್ರಹ್ಮವಾಯುಗಳನ್ನು ಮೊದಲು ಮಾಡಿ ಸಕಲ ಜೀವರ ಪರಿಮಾಣ 'ಅಣು' ವೇ ಆಗಿದ್ದರೂ ಅವರ ಯೋಗ್ಯತೆ ಒಂದೇ ತೆರನಾಗಿಲ್ಲ, ಅವರವರ ಯೋಗ್ಯತೆಯಲ್ಲಿ ತಾರತಮ್ಯ ಇದ್ದೇ ಇದೆ.

ಈ ತಾರತಮ್ಯಕ್ಕನುಗುಣವಾಗಿಯೇ ಜೀವರನ್ನು ಭಗವಂತನ ಪ್ರತಿಮೆಗಳೆಂದು ಪೂಜಿಸಬೇಕು ಎಂಬುದಾಗಿ ಕಪಿಲರೂಪೀ ಭಗವಂತನು ತನ್ನ ತಾಯಿಗೆ ಜೀವರ ತಾರತಮ್ಯವನ್ನು ಉಪದೇಶಿಸಿದ್ದಾನೆ. ಅದು ಹೀಗಿದೆ.

ಮುಕ್ತಿ ಅಯೋಗ್ಯ ಜೀವರಿಗಿಂತ ಮುಕ್ತಿಯೋಗ್ಯ ಜೀವರು ಶ್ರೇಷ್ಠರು ಅವರಲ್ಲಿಯೂ ಸ್ಥಾವರಗಳಿಗಿಂತ ಜಂಗಮ ಪ್ರಾಣಿಗಳು ಶ್ರೇಷ್ಠ. ಅವುಗಳಲ್ಲಿ ಕೇವಲ ಮನಸ್ಸುಳ್ಳವುಗಳಿಗಿಂತ ಇಂದ್ರಿಯ ವ್ಯಾಪಾರವುಳ್ಳವು ಶ್ರೇಷ್ಠ. ಅವುಗಳಲ್ಲಿ ಸ್ಪರ್ಶಮಾತ್ರವನ್ನು ತಿಳಿಯುವವಕ್ಕಿಂತ ರಸವನ್ನು ತಿಳಿಯಬಲ್ಲ ಮೀನು ಮುಂತಾದವು ಶ್ರೇಷ್ಠ ಅವುಗಳಿಗಿಂತ ಗಂಧವನ್ನು ತಿಳಿಯುವ ಭ್ರಮರಾದಿಗಳು, ಅವುಗಳಿಗಿಂತ ಶಬ್ದವನ್ನು ತಿಳಿಯುವ ಸರ್ಪಾದಿಗಳು. ಅವುಗಳಿಗಿಂತ ನಾನಾ ರೂಪಗಳನ್ನು ತಿಳಿಯುವ ಕಾಗೆ ಮೊದಲಾದವು. ಅವುಗಳಿಗಿಂತ ಎರಡು ಸಾಲು ಹಲ್ಲುಗಳುಳ್ಳ ಪ್ರಾಣಿಗಳು, ಅವುಗಳಲ್ಲಿ ಕಾಲುಗಳಿಲ್ಲದವುಗಳಿಗಿಂತ ಬಹಳ ಕಾಲುಗಳುಳ್ಳವುಗಳು, ಅವುಗಳಿಗಿಂತ ನಾಲ್ಕು ಕಾಲಿನ ಪ್ರಾಣಿಗಳು, ಅವುಗಳಿಗಿಂತ ಎರಡು ಕಾಲಿನ ಮಾನವರು, ನಾಲ್ಕು ವರ್ಣದವರು, ಅವರಲ್ಲಿಯೂ ಬ್ರಾಹ್ಮಣರು, ಅವರಲ್ಲಿಯೂ ವೇದವನ್ನು ಬಲ್ಲವರು, ಅವರಿಗಿಂತ ವೇದಾರ್ಥ ಬಲ್ಲ ಋಷಿಗಳು, ಅವರಿಗಿಂತ ವೇದಾರ್ಥದಲ್ಲಿ ಸಂಶಯ ಕಳೆಯಬಲ್ಲ ದೇವತೆಗಳು, ಅವರಲ್ಲಿಯೂ ತನ್ನ ವಿಹಿತಧರ್ಮವನ್ನು ಪೂರ್ತಿ ಅನುಷ್ಠಾನ ಮಾಡುವ ದೇವೇಂದ್ರ, ಅವನಿಗಿಂತ ಭಗವತ್ ಪ್ರೀತಿಯನ್ನು ಹೊರತು ಬೇರೇನನ್ನೂ ಬಯಸದೆ ವಿಷ್ಣುಧರ್ಮವನ್ನು ಆಚರಿಸುವ ಶೇಷ ಗರುಡರು, ಅವರಿಗಿಂತ ಎಲ್ಲ ಕರ್ಮಫಲವನ್ನು ಭಗವಂತನಿಗೆ ಅರ್ಪಿಸುತ್ತ ಎಲ್ಲರಿಗಿಂತ ಹೆಚ್ಚಿನ ಭಗವದ್‌ಭಕ್ತಿ ಸಂಪನ್ನನಾಗಿ ಪರಾಂತಕಾಲದವರೆಗೂ ಬದುಕಿ ನಿರ್ದೋಷನಾದ ಪರಬ್ರಹ್ಮನನ್ನು

ಕಾಣುವವನು, ಭಗವಂತನಿಂದಲೇ ಹುಟ್ಟಿದ ಚತುರ್ಮುಖ ಬ್ರಹ್ಮ ಶ್ರೇಷ್ಠನು. ಅವನಿಗಿಂತ ಶ್ರೇಷ್ಠನಾದ ಇನ್ನೊಬ್ಬ ಜೀವನನ್ನು ನಾಕಾಣೆ.[1]

ಹೀಗೆ ಇರುವ ತಾರತಮ್ಯವನ್ನು ತಿಳಿದುಕೊಂಡು ಅದಕ್ಕನುಗುಣವಾಗಿ ತಮಗಿಂತ ಜ್ಞಾನ, ಭಕ್ತಿ, ವೈರಾಗ್ಯಾದಿಗಳಿಂದ ಕೂಡಿದ ಜೀವರಲ್ಲಿ ಭಕ್ತಿಮಾಡಬೇಕು. ಇದರಿಂದ ಭಗವಂತ ಪ್ರೀತನಾಗುತ್ತಾನೆ.



1. ಜೀವಾಃ ಶ್ರೇಷ್ಠಾಹ್ಯಜೀವಾನಾಂ ತತಃ ಪ್ರಾಣಭೃತಃ ಶುಭೇ ।
ತತಃ ಸಚಿತ್ತಾಃ ಪ್ರವರಾಸ್ತತಶ್ಚೇಂದ್ರಿಯವೃತ್ತಯಃ ॥ ಶ್ರೀಮದ್‌ಭಾಗವತ (3-30-28)
ತತ್ರಾಪಿ ಸ್ಪರ್ಶವೇದಿಭ್ಯಃ ಪ್ರವರಾ ರಸವೇದಿನಃ ।
ತೇಭ್ಯೋ ಗಂಧವಿದಃ ಶ್ರೇಷ್ಠಾಸ್ತತ ಶಬ್ದವಿದೋ ವರಾಃ ॥
ರೂಪಭೇದವಿದಃ ಸ್ತತ್ರ ತತಶ್ಚೋಭಯತೋದತಃ ।
ತೇಷಾಂ ಬಹುಪದಃ ಶ್ರೇಷ್ಠಾಶ್ಚತುಷ್ಪಾದಸ್ತತೋದ್ವಿಪಾತ್ ॥
ತತೋ ವರ್ಣಾಶ್ಚ ಚತ್ವಾರಸ್ತೇಷಾಂ, ಬ್ರಾಹ್ಮಣ ಉತ್ತಮಃ ।
ಬ್ರಾಹ್ಮಣೇಷ್ವಪಿ ವೇದಜ್ಞೋ ಹ್ಯರ್ಥಜ್ಞೋಽಭ್ಯಧಿಕಸ್ತತಃ ॥
ಅರ್ಥಜ್ಞಾತ್ ಸಂಶಯಚ್ಛೇತ್ತಾ ತತಃ ಶ್ರೇಯಾನ್ ಸ್ವಧರ್ಮಕೃತ್ ।
ಮುಕ್ತಸಂಗಸ್ತತೋ ಭೂಯಾನ್ ನ ದೋಗ್ಧಾಧರ್ಮಮಾತ್ಮನಃ ॥
ತಸ್ಮಾನ್ಮಯ್ಯರ್ಪಿತಾಶೇಷ ಕ್ರಿಯಾರ್ಥಾತ್ಮರತಿರ್ನರಃ ।
ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತಕರ್ಮಣಃ ।
ನ ಪಶ್ಯಾಮಿ ಪರಂ ಭೂತಮಕರ್ತುಃ ಸಮದರ್ಶನಾತ್ ॥ ಶ್ರೀಮದ್‌ಭಾಗವತ (3-30-33)

# ಜೀವರ ಪ್ರಭೇದಗಳು

ಅಸ್ವತಂತ್ರ ಚೇತನರು ಎರಡು ವಿಧರಾಗಿದ್ದಾರೆ. 1. ದುಃಖಸ್ಪರ್ಶವುಳ್ಳವರು 2 ದುಃಖಸ್ಪರ್ಶರಹಿತರು. ದುಃಖಸ್ಪರ್ಶರಹಿತಳು ನಿತ್ಯಮುಕ್ತಳಾದ ಶ್ರೀರಮಾದೇವಿಯು. ರಮಾದೇವಿಯರನ್ನು ಬಿಟ್ಟರೆ ಎಲ್ಲ ಚೇತನರೂ ದುಃಖಸ್ಪೃಷ್ಟರೇ ಆಗಿದ್ದಾರೆ. ಈ ಜೀವರು ಅನಂತರು ಹಾಗೂ ಶರೀರೇಂದ್ರಿಯಾದಿಗಳಿಂದ ಬದ್ಧರಾಗಿದ್ದಾರೆ.

ದುಃಖಸ್ಪೃಷ್ಟ ಜೀವರು ಮೂರು ವಿಧರು. (ತತ್ವವಿವೇಕ ಗ್ರಂಥದಲ್ಲಿ ಮುಕ್ತರು, ಅಮುಕ್ತರು ಎಂದು ಎರಡು ವಿಭಾಗ ಮಾಡಿದ್ದುಂಟು). 1. ಮುಕ್ತಿಯೋಗ್ಯರು 2. ನಿತ್ಯಸಂಸಾರಿಗಳು 3. ತಮೋಯೋಗ್ಯರು ಎಂದು ಮೂರು ವಿಧರಾಗಿದ್ದಾರೆ.

ಮುಕ್ತಿಯೋಗ್ಯರಲ್ಲಿ 1. ದೇವತೆಗಳು 2. ಪಿತೃಗಳು 3. ಋಷಿಗಳು 4. ಚಕ್ರವರ್ತಿಗಳು 5. ಮನುಷ್ಯೋತ್ತಮರು ಎಂಬುದಾಗಿ ಐದು ವಿಧರು. (ತತ್ವಸಂಖ್ಯಾನದಲ್ಲಿ ತಿಳಿಸಿದಂತೆ)

1. ಬ್ರಹ್ಮವಾಯು ಮೊದಲಾದವರು ದೇವತೆಗಳು.
2. ಚಿರಪಿತೃಗಳು ಪಿತೃಗಳು.
3. ನಾರದಾದಿಗಳು ಋಷಿಗಳು
4. ರಘು, ಅಂಬರೀಷಾದಿಗಳು ಚಕ್ರವರ್ತಿಗಳು.
5. ಮನುಷ್ಯೋತ್ತಮರು.

ಮನುಷ್ಯೋತ್ತಮರಲ್ಲಿ ಎರಡು ವಿಧ. 1. ಚತುರ್ಗುಣೋಪಾಸಕರು 2. ಏಕಗುಣೋಪಾಸಕರು. ಇವರಲ್ಲಿ ತೃಣಜೀವರು ಏಕಗುಣೋಪಾಸಕರು. ಇವರಿಂದ ಭಿನ್ನರಾದವರು ಚತುರ್ಗುಣೋಪಾಸಕರು ಎಂದು ತಿಳಿಯಬೇಕು.

ಜೀವರು ತ್ರಿವಿಧರು ಎಂಬಲ್ಲಿ ದೇವ, ಮನುಷ್ಯ ದಾನವರೆಂದು ತಿಳಿಯಬೇಕು. ಇವರಲ್ಲಿ ದೇವತೆಗಳು ಮುಕ್ತಿಯೋಗ್ಯರು, ಮನುಷ್ಯರಲ್ಲಿ ಮನುಷ್ಯೋತ್ತಮರು ಮುಕ್ತಿಯೋಗ್ಯರು, ಮನುಷ್ಯ ಮಧ್ಯಮರು ನಿತ್ಯಸಂಸಾರಿಗಳು, ಮನುಷ್ಯ ಅಧಮರು

ನರಕಭಾಗಿಗಳು. ದಾನವರು ತಮಸ್ಸಿಗೆ ಹೋಗುವವರು ಎಂಬಲ್ಲಿ ನಿರ್ಣಯೋಕ್ತಿಯು ಪ್ರಮಾಣವು.[1]

ಕೆಲವರು ''ಆತ್ಮ' ನೆಂದೇ ಪರದೇವತೆಯಾದ ನಾರಾಯಣನನ್ನು ಉಪಾಸನೆಮಾಡಿ ಇಲ್ಲಿಯೇ ಮುಕ್ತರಾಗುತ್ತಾರೆ. ಅವರಿಗೆ ಉತ್ಕ್ರಮಣವಿಲ್ಲ ಎಂಬುದಾಗಿ ಭಾಷ್ಯದಲ್ಲಿ ಹೇಳಿದೆ. ಅದರಂತೆ ಹಲವು ಮನುಷ್ಯರು ದೇಹದಿಂದ ಉತ್ಕ್ರಮಣ ಹೊಂದದಲೇ ದೇಹಪಾತ ಸಮಯದಲ್ಲಿ ಅದರ ದೋಷವನ್ನು ಭೋಗಿಸಿ ಪ್ರಾರಬ್ಧಕರ್ಮ ಭೋಗಾನಂತರ ದೇಹನಾಶವಾಗುತ್ತಿರಲು ವಿಷ್ಣುದರ್ಶನ ಹೊಂದಿದವರಾಗಿ (ಮುಕ್ತರಾಗಿ) ಇಲ್ಲಿಯೇ (ಭೂಲೋಕದಲ್ಲಿ) ನಿತ್ಯಾನಂದಾನುಭವ ಮಾಡುತ್ತಾ ಇರುತ್ತಾರೆಂಬುದಾಗಿ ಬೃಹದ್ಭಾಷ್ಯದಲ್ಲಿ ಹೇಳಿದೆ. ಬ್ರಹ್ಮದೇವರಿಂದ ಆರಂಭಿಸಿ ಸ್ತಂಭ (ತೃಣಜೀವ) ಪರ್ಯಂತ ಎಲ್ಲವೂ ಅಸಾರ, ಅನಿತ್ಯವೆಂದು ತಿಳಿಯಬೇಕು ಎಂದು ಭಾಷ್ಯ ವಚನವು. ಹಾಗೂ ಅವ್ಯಕ್ತದಿಂದ ಆರಂಭಿಸಿ ತೃಣಜೀವಪರ್ಯಂತ ಎಲ್ಲರೂ ಅತ್ಯಲ್ಪ ಆನಂದಭಾಗಿಗಳು ಎಂಬುದಾಗಿ ಭಾಷ್ಯದಲ್ಲಿ ಹೇಳಿದೆ. (ಅವ್ಯಕ್ತಾದಿ ತೃಣಾಂತಾಸ್ತು ವಿಪ್ಲುಡಾನಂದಭಾಗಿನಃ)

ಇನ್ನು ಚತುರ್ಗುಣ ಉಪಾಸಕರ ವಿಷಯದಲ್ಲಿ - ಮನುಷ್ಯೋತ್ತಮರು ಸತ್, ಚಿತ್, ಆನಂದ, ಆತ್ಮಾ (ಆನಂದ; ಜ್ಞಾನ, ಸತ್‌ಸ್ವರೂಪನು, ನನ್ನ ಸ್ವಾಮಿಯು) ಹೀಗೆ ಉಪಾಸನೆ ಮಾಡಬೇಕು, ಎಂದು ಅಣುಭಾಷ್ಯದಲ್ಲಿ ಹೇಳಿದೆ. (ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು - ಅಣುಭಾಷ್ಯ.)

ದುಃಖರಹಿತ ಆನಂದಾನುಭವಸ್ವರೂಪವು ಮೋಕ್ಷಯೋಗ್ಯರ (ಉತ್ತಮ ಜೀವರ) ಲಕ್ಷಣವು. ಭಕ್ತಿ ಜ್ಞಾನಾದಿಗಳು ಸರ್ವರಿಗೆ ಅನಾದಿಗಳು ಎಂಬುದಾಗಿ ಬೃಹದ್ಭಾಷ್ಯದಲ್ಲಿ ಹೇಳಿದೆ.



---

1. ತ್ರಿವಿಧಾ ಜೀವ ಸಂಘಾಸ್ತು ದೇವ ಮಾನುಷದಾನವಾಃ ।
ತತ್ರದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ॥ 2-85
ಮಧ್ಯಮಾ ಮಾನುಷಾ ಯೇತು ಸೃತಿಯೋಗ್ಯಾಃ ಸ ದೈವ ಹಿ ।
ಅಧಮಾ ನಿರಯಾಯ್ಯೆವ ದಾನವಾಸ್ತು ತಮೋ ಲಯಾಃ ॥ 2-86

# ಜೀವ ತ್ರೈವಿಧ್ಯ

ಪ್ರಕೃತಿಯಿಂದ ಉಂಟಾದ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಇವುಗಳ ಅಭಿಮಾನಿದೇವತೆಗಳು ದೇಹದಲ್ಲಿರುವ ಸ್ವರೂಪತಃ ನಾಶರಹಿತನಾದ ಜೀವನನ್ನು ಬಂಧಿಸುತ್ತವೆ.[1]

ಹೀಗೆ ಈ ಮೂರು ಗುಣಗಳಿಂದ ಕೂಡಿದ ಜನರು ಸಾತ್ವಿಕರು, ರಾಜಸರು, ತಾಮಸರು ಎಂಬುದಾಗಿ ಕರೆಯಲ್ಪಡುತ್ತಾರೆ.

ಸತ್ವಗುಣವು (ಸತ್ವಾಭಿಮಾನಿ ದೇವತೆಯಾದ ಶ್ರೀದೇವಿಯು) ಶುದ್ಧವಾದುದರಿಂದ ರೋಗವನ್ನುಂಟುಮಾಡದೇ ಜೀವನಿಗೆ ತತ್ವಜ್ಞಾನವನ್ನು, ಸುಖವನ್ನು ಉತ್ಪತ್ತಿಮಾಡುವುದರ ಮೂಲಕ ಬಂಧಕವಾಗಿರುತ್ತದೆ.[2]

ರಜೋಗುಣವು ಆಸೆ, ಆಸಕ್ತಿಗಳನ್ನುಂಟುಮಾಡಿ (ರಜೋಭಿಮಾನಿ ಭೂದೇವಿಯು) ಸೃಷ್ಟ್ಯಾದಿರೂಪ ರಂಜನೆಯನ್ನು ಮಾಡುವುದರ ಮೂಲಕ ಕರ್ಮಾಸಕ್ತಿಯಿಂದ ಬಂಧಕವಾಗಿರುತ್ತದೆ.[3]

ತಮೋಗುಣವು (ತಮೋಭಿಮಾನಿ ದುರ್ಗಾದೇವಿಯು) ಮಿಥ್ಯಾಜ್ಞಾನ ಜನಕವೆನಿಸಿ ಅಧರ್ಮಬುದ್ಧಿ, ಆಲಸ್ಯ, ನಿದ್ರೆಗಳನ್ನು ಜೀವನಿಗೆ ವೃದ್ಧಿಮಾಡುವುದರ ಮೂಲಕ ಬಂಧಕವಾಗಿರುತ್ತದೆ.[4]

ಸಾತ್ವಿಕಜನರು ದೇವತೆಗಳನ್ನು, ರಾಜಸಜನರು ಯಕ್ಷ, ರಕ್ಷೋಗಣವನ್ನು, ತಾಮಸಜನರು ಪಿಶಾಚಿ, ಭೂತಗಣಗಳನ್ನು ಪೂಜಿಸುತ್ತಾರೆ.[5]

---

1. ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
   ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ಗೀತಾ (14-5)
2. ತತ್ರ ಸತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್।
   ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ಗೀತಾ(14-6)
3. ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್।
   ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ಗೀತಾ (14-7)
4. ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।
   ಪ್ರಮಾದಾಲಸ್ಯ ನಿದ್ರಾಭಿಃ ತನ್ನಿಬಧ್ನಾತಿ ಭಾರತ ॥ ಗೀತಾ (14-8)
5. ಯಜಂತೇ ಸಾತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
   ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾಜನಾಃ ॥ ಗೀತಾ (17-4)

ಸಾತ್ವಿಕ ಜನರು ಅಪರೋಕ್ಷಜ್ಞಾನದಿಂದ ಜನೋಲೋಕ, ತಪೋಲೋಕ ಮೊದಲಾದ ಮೇಲಿನ ಲೋಕಗಳನ್ನು ಹೊಂದುತ್ತಾರೆ. ರಾಜಸಜನರು (ಕಾಮ್ಯಕರ್ಮಗಳನ್ನು ಮಾಡುವವರು) ಸ್ವರ್ಗಾದಿ ಲೋಕಗಳನ್ನು ಹೊಂದುತ್ತಾರೆ. ಸತ್ವರಜೋಗುಣಗಳಿಗಿಂತ ಹೀನವಾದ ತಮೋಗುಣದ ಅಜ್ಞಾನದಲ್ಲಿರುವ ತಾಮಸ ಜನರು ನಿತ್ಯನರಕವನ್ನು ಹೊಂದುತ್ತಾರೆ.[6]

ಜೀವನು ಯಾವಾಗ ಸತ್ವಾದಿ ಗುಣಗಳಿಗಿಂತ ಉತ್ತಮನಾದ, ಸ್ವತಂತ್ರನಾದ ಭಗವಂತನನ್ನು ತಿಳಿದುಕೊಳ್ಳುತ್ತಾನೆಯೋ, ಆಗ ಆ ಜ್ಞಾನಿಯಾದ ಜೀವನು ಜ್ಞಾನಾನಂದಾತ್ಮಕನಾದ ಭಗವಂತನಲ್ಲಿ ಸ್ಥಿತಿಯನ್ನು ಹೊಂದುತ್ತಾನೆ.[7]

ಇಲ್ಲಿ ಮೇಲೆ ತಿಳಿಸಿದ ವಿಂಗಡನೆ ಸ್ಥೂಲವಾದುದು. ಸೂಕ್ಷ್ಮವಾಗಿ ಪರಿಶೀಲಿಸಿದಾಗ ಈ ಮೂರು ಗುಂಪಿನಲ್ಲಿ ಹಲವಾರು ವೈವಿಧ್ಯಗಳಿವೆ. ಇದನ್ನೇ "ಜೀವತ್ರೈವಿಧ್ಯ" ಎಂಬುದಾಗಿ ಹೇಳುವುದುಂಟು. ಭಗವದ್ಗೀತೆಯಲ್ಲಿ" "ಶ್ರದ್ಧಾತ್ರಯವಿಭಾಗ" ದಲ್ಲಿ ಇದನ್ನು ತಿಳಿಸಿದ್ದಾರೆ. ಶ್ರದ್ಧೆಯು ಜೀವನ ಸ್ವರೂಪವೇ ಆಗಿದೆಯೆಂಬುದಾಗಿ ಗೀತೆಯಲ್ಲಿ ತಿಳಿಸಿದ್ದಾರೆ.

**ಶ್ರದ್ಧಾಮಯೋಽಯಂ ಪುರುಷಃ ಯೋ ಯಚ್ಛ್ರದ್ಧಃ ಸ ಏವ ಸಃ ||** ಗೀತಾ (17-3)

ಶ್ರೀಮದಾಚಾರ್ಯರು ಭಗವದ್ಗೀತಾತಾತ್ಪರ್ಯದಲ್ಲಿ ಪ್ರಕಾಶಸಂಹಿತೆಯನ್ನು ಉಲ್ಲೇಖಿಸಿ ಜೀವತ್ರೈವಿಧ್ಯವನ್ನು ಸ್ಪಷ್ಟಪಡಿಸಿದ್ದಾರೆ. ಸ್ವಭಾವತಃ ಜೀವರು ಉತ್ತಮ, ಅಧಮ, ಮಧ್ಯಮರೆಂದು ಮೂರು ವಿಧರಾಗಿದ್ದಾರೆ. ದೇವತೆಗಳು ಉತ್ತಮಜೀವರು, ಮನುಷ್ಯರಲ್ಲಿ ಮಧ್ಯಮವರ್ಗದ ಗುರಿವುಳ್ಳವರು ಮಧ್ಯಮರು, ಅಸುರರು ಅಧಮರು ಎಂಬುದಾಗಿ ತಿಳಿಯಬೇಕು.[8]

ಕೆಲವೊಮ್ಮೆ ದೇವತೆಗಳು ಮನುಷ್ಯರಾಗಿ ಹುಟ್ಟಬಹುದು. ಮನುಷ್ಯರು ಅಸುರಜಾತಿಯಲ್ಲಿ ಬರಬಹುದು. ಆದರೆ ಇದು ಶಾರೀರಿಕ ಬದಲಾವಣೆಯೇ ಹೊರತು ಜೀವಸ್ವರೂಪದ ಬದಲಾವಣೆಯಲ್ಲ. ಅದೂ ತಾತ್ಕಾಲಿಕವಾದುದು.

---

6. ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ |
ಜಘನ್ಯ ಗುಣವೃತ್ತಿಸ್ಥಾಃ ಅಧೋಗಚ್ಛಂತಿ ತಾಮಸಾಃ || ಗೀತಾ (14-18)

7. ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ |
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ || ಗೀತಾ (14-19)

8. ಸ್ವಭಾವತಃ ತ್ರಿಧಾಜೀವಾ ಉತ್ತಮಾಧಮ ಮಧ್ಯಮಾಃ |
ಉತ್ತಮಾ ತತ್ರ ದೇವಾದ್ಯಾಃ ಮರ್ತ್ಯಮಧ್ಯಾಸ್ತು ಮಧ್ಯಮಾಃ |
ಅಧಮಾ ಅಸುರಾದ್ಯಾಶ್ಚ ನೈಷಾಮಸ್ತ್ಯನ್ಯಥಾ ಭವಃ ||

ಸಾಮಾನ್ಯವಾಗಿ ಜೀವಸ್ವರೂಪಕ್ಕೆ ಅನುಗುಣವಾಗಿಯೇ ದೈಹಿಕವಾದ ಮನಸ್ಸಿನ ಭಾವನೆಗಳು ಇರುತ್ತವೆ. ಅಂದರೆ ಚಿನ್ಮಯವಾದ ಮನಸ್ಸಿನ ಪ್ರಭಾವವೇ ಜಡವಾದ ಮನಸ್ಸಿನಲ್ಲಿ ಇರುತ್ತದೆ. ಆದರೂ ಕೆಲವೊಮ್ಮೆ ಸ್ವಭಾವಕ್ಕೆ ವಿರುದ್ಧವಾದ ಭಾವನೆಗಳೂ ಜಡವಾದ ಮನಸ್ಸಿನಲ್ಲಿ ಮೂಡಬಹುದು. ಇಂತಹ ಭಾವನೆಗಳು ಬಿಳಿಯಾದ ಸ್ಫಟಿಕವು ಕೆಂಪಾದ ಹವಳದ ಸಂಪರ್ಕದಿಂದ ಕೆಂಪಾಗಿ ಕಾಣುವಂತೆ ತಾತ್ಕಾಲಿಕವಾದುದು ಸ್ಥಿರವಾದುದಲ್ಲ.

ಸಾತ್ವಿಕರಾದವರೂ ಕೆಲವೊಮ್ಮೆ ತಾಮಸರಂತೆ ವರ್ತಿಸುತ್ತಾರೆ. ತಾಮಸರೂ ಸಾತ್ವಿಕರಂತೆ ವರ್ತಿಸುತ್ತಾರೆ. ಆದರೆ ಇವೆರಡೂ ನಿಜವೆಂದು ಭಾವಿಸುವಂತಿಲ್ಲ. ಇವು ಬಾಹ್ಯ ಒತ್ತಡದಿಂದ ಅಂತಃಕರಣದಲ್ಲಿ ಬರುವ (ಕಾಣುವ) ತಾತ್ಕಾಲಿಕ ವ್ಯತ್ಯಾಸಗಳು. ಇಂಥ ವೈಪರೀತ್ಯಗಳು ಅಪರೂಪವಾಗಿ ಕಾಣುತ್ತವೆ. ಸಾಮಾನ್ಯವಾಗಿ ಜೀವ ಸ್ವರೂಪದಲ್ಲಿರುವ ಸ್ವಭಾವವೇ ಅಂತಃಕರಣದಲ್ಲಿ ವ್ಯಕ್ತವಾಗುತ್ತದೆ.[9]

ಮೇಲೆ ಹೇಳಿದ ಮೂರು ವಿಧ ಜೀವರಿಗೆ ಅಂತಿಮಗುರಿ ನಿಶ್ಚಿತವೇ. ಉತ್ತಮರು ಮೋಕ್ಷಯೋಗ್ಯರು, ಮಧ್ಯಮರು ನಿತ್ಯ ಸಂಸಾರಿಗಳು, ಅಧಮರು ತಮೋಯೋಗ್ಯರು ಎಂಬುದಾಗಿ ತಿಳಿಯಬೇಕು. ಮಧ್ಯದಲ್ಲಿ ಸ್ವರ್ಗ ನರಕಗಳ ವ್ಯತ್ಯಾಸವಿದ್ದರೂ ಅಂತಿಮವಾಗಿ ಆ ವರ್ಗದ ಜೀವರು ಅವರಿಗೆ ನಿಶ್ಚಿತವಾದ ಸ್ಥಾನಕ್ಕೇ ಹೋಗಬೇಕಾಗುತ್ತದೆ.

ಸಾತ್ವಿಕ ಜೀವರಲ್ಲಿ ಮತ್ತೆ ಮೂರು ವಿಧ. ಉತ್ತಮ ಸಾತ್ವಿಕರು ದೇವತೆಗಳು. ಋಷಿಗಳು ಮಧ್ಯಮ ಸಾತ್ವಿಕರು. ಮನುಷ್ಯರಲ್ಲಿ ಉತ್ತಮರಾದವರು ಅಧಮ ಸಾತ್ವಿಕರು. (ಮನುಷ್ಯರು ರಾಜಸರ ಗುಂಪಿನಲ್ಲಿ ಬರುವರು. ಅವರಲ್ಲಿ ಸತ್ವಗುಣವೂ ಇರುವುದರಿಂದ ಸಾತ್ವಿಕರಲ್ಲಿ ಸೇರಿಸಲಾಗಿದೆ.)[10]

ಇನ್ನು ಸಾತ್ವಿಕರಲ್ಲಿ – ಸಾತ್ವಿಕ ಸಾತ್ವಿಕ, ಸಾತ್ವಿಕ ರಾಜಸ, ಸಾತ್ವಿಕ ತಾಮಸ, ರಾಜಸರಲ್ಲಿ ರಾಜಸ ಸಾತ್ವಿಕರು, ರಾಜಸ ರಾಜಸರು, ರಾಜಸ ತಾಮಸರು ಇತ್ಯಾದಿ. ಅನೇಕ ಅವಾಂತರ ಪ್ರಭೇದಗಳಿವೆ. ಗ್ರಂಥ ಬಾಹುಲ್ಯದಿಂದ ಎಲ್ಲವನ್ನೂ ಇಲ್ಲಿ ಹೇಳಲಾಗಿಲ್ಲ.



9. ಸಾತ್ವಿಕಸ್ಯ ತಮೋರೂಪಾ ಶ್ರದ್ಧಾಂತಃಕರಣಾತ್ಮಿಕಾ ।
ಸಾತ್ವಿಕೀ ರಾಜಸಸ್ಯಾಪಿ ಭೂಯಸ್ತ್ವಾತ್ ತದ್ವಿವಿಚ್ಯತೇ ॥ ಗೀತಾ ತಾ(17-7)

10. ಸಂತಸ್ತು ತ್ರಿವಿಧಾಃ ಪ್ರೋಕ್ತಾ ಉತ್ತಮಾಧಮಮಧ್ಯಮಾಃ ।
ಉತ್ತಮಾ ದೇವತಾಸ್ತತ್ರ ಋಷ್ಯಾದ್ಯಾ ಮಧ್ಯಮಾಮತಾಃ ।
ಅಧಮಾ ಮಾನುಷೋತ್ಕೃಷ್ಟಾಃ ತೇ ಚಾಪಿ ತ್ರಿವಿಧಾ ಮತಾ ॥ (ಭಾ.ತಾ. ಏಕಾದಶಸ್ಕಂಧ)

# ಜೀವನ ಕಥೆ

(ಪುರಂಜನೋಪಾಖ್ಯಾನ)

ಮುಕ್ತಿಯೋಗ್ಯ ಜೀವರಿಗೆ ಚತುರ್ಮುಖನು ಅಭಿಮಾನಿ. ನಿತ್ಯಸಂಸಾರಿ ಜೀವರಿಗೆ ಪುರಂಜನ ಅಭಿಮಾನಿ. ಅವನು ರಾಜ. ಶ್ರೀಹರಿಯ ಪುತ್ರ. ತಮೋಯೋಗ್ಯ ಜೀವರಿಗೆ ಕಲಿ ಅಭಿಮಾನಿ ಆದ್ದರಿಂದ ಪುರಂಜನನ ಕಥೆ ಹೆಚ್ಚಾಗಿ ಜೀವನ ಕಥೆಯಂತೆಯೇ ಇದೆ. ಹಾಗಾಗಿ ನಾರದರು ಪುರಂಜನ ಕಥೆಯ ಮೂಲಕ ಜೀವನ ಸಂಸಾರದ ಕಥೆಯನ್ನೇ ಪ್ರಾಚೀನಬರ್ಹಿರಾಜನಿಗೆ ವರ್ಣಿಸಿದ್ದಾರೆ.

ಹಿಂದೆ ಮಹಾಕೀರ್ತಿಶಾಲಿಯಾದ ಪುರಂಜನನೆಂಬ ರಾಜನಿದ್ದ. ಅವನಿಗೆ ಅವಿಜ್ಞಾತ ಹೆಸರಿನ ಮಿತ್ರನಿದ್ದ. ಆ ಮಿತ್ರನ ಚಟುವಟಿಕೆಗಳು ಯಾರಿಗೂ ಕಾಣಿಸುತ್ತಿರಲಿಲ್ಲ. ರಾಜ ತನ್ನ ವಾಸಕ್ಕೆ ಯೋಗ್ಯವಾದ ಪಟ್ಟಣವನ್ನು ಹುಡುಕುತ್ತ ಸಂಚರಿಸಿದ. ಹಿಮಾಲಯದ ದಕ್ಷಿಣಕ್ಕೆ ಭಾರತ ಭೂಮಿಯಲ್ಲಿ ಒಂದು ನವದ್ವಾರಯುಕ್ತವಾದ ಪಟ್ಟಣವನ್ನು ಕಂಡ. ಆ ಪಟ್ಟಣದ ಒಡತಿ ಪುರಂಜನಿ. ಅವಳಿಗೆ ಹತ್ತು ಮಂದಿ ಸೇವಕರು. ಈ ಸೇವಕರಿಗೆ ಮುಖ್ಯ ಸೇವಕನೊಬ್ಬನಿದ್ದ. ಇವಳ ಅಂಗರಕ್ಷಣೆ ಹಾಗೂ ನಗರ ರಕ್ಷಣೆಯನ್ನು ಐದು ಹೆಡೆಗಳ ಸರ್ಪ ಮಾಡುತ್ತಿತ್ತು. ರಾಜ ಅವಳ ರೂಪಕ್ಕೆ ಮನಸೋತ. ಅವಳೂ ರಾಜನನ್ನು ಬಯಸಿದಳು.ಗಾಂಧರ್ವವಿಧಿಯಿಂದ ಇಬ್ಬರೂ ವಿವಾಹ ಮಾಡಿಕೊಂಡರು. ನಗರದಿಂದ ಬೇರೆ ಬೇರೆ ದೇಶಗಳಿಗೆ ಹೋಗಲು ರಾಜನಿಗೆ ನವದ್ವಾರಗಳು. ಮೇಲುಗಡೆ ಏಳು ಬಾಗಿಲುಗಳು ಕೆಳಗಡೆ ಎರಡು ಬಾಗಿಲುಗಳು ಏಳರಲ್ಲಿ ಐದು ಪೂರ್ವಾಭಿಮುಖ. ಎರಡು ಪಶ್ಚಿಮಾಭಿಮುಖ. ಒಂದು ದಕ್ಷಿಣಾಭಿಮುಖ. ಇನ್ನೊಂದು ಉತ್ತರಾಭಿಮುಖ. ಈ ಎಲ್ಲ ದ್ವಾರಗಳಲ್ಲಿ ಬೇರೆ ದೇಶಗಳಿಗೆ ಸಂಚಾರ ಮಾಡಲು ರಾಜನಿಗೆ ಬೇರೆ ಬೇರೆ ಮಿತ್ರರಿದ್ದರು. ಖದ್ಯೋತಾ ಆವಿರ್ಮುಖೀ ಎಂಬ ಪೂರ್ವದ ಎರಡು ಬಾಗಿಲುಗಳಿಂದ ರಾಜ ದ್ಯುಮಂತ ಎಂಬ ಮಿತ್ರನೊಂದಿಗೆ ವಿಭ್ರಾಜಿತ ದೇಶಕ್ಕೆ ಹೋಗಿ ಬರುತ್ತಿದ್ದ. ನಲಿನಿ, ನಾಲಿನಿ ಎಂಬ ಎರಡು ಪೂರ್ವದ ಬಾಗಿಲುಗಳಿಂದ ಅವಧೂತನೆಂಬ ಮಿತ್ರನೊಂದಿಗೆ ಸೌರಭ ದೇಶಕ್ಕೆ ಹೋಗಿ ಬರುತ್ತಿದ್ದ: ಮುಖ್ಯಾ ಎಂಬ ಪೂರ್ವ ಬಾಗಿಲಿನಿಂದ ರಸಜ್ಞ, ವಿಪಣರೆಂಬ ಮಿತ್ರರೊಂದಿಗೆ ಆಪಣ ಮತ್ತು ಬಹೂದನ ದೇಶಗಳಿಗೆ ಹೋಗಿ ಬರುತ್ತಿದ್ದ. ದೇವಭೂ ಎಂಬ ದಕ್ಷಿಣ ಬಾಗಿಲಿನಿಂದ ಶ್ರುತಧರನೆಂಬ ಮಿತ್ರನೊಂದಿಗೆ ದಕ್ಷಿಣಪಾಂಚಾಲಕ್ಕೂ, ಪಿತೃಭೂ ಎಂಬ ಉತ್ತರದ ಬಾಗಿಲಿನಿಂದ ಶ್ರುತಧರನೊಂದಿಗೆ ಉತ್ತರ ಪಾಂಚಾಲಕ್ಕೂ ಹೋಗಿ ಬರುತ್ತಿದ್ದ. ಪಶ್ಚಿಮದ ಆಸುರೀ ದ್ವಾರದಿಂದ ದುರ್ಮದನೆಂಬ ಮಿತ್ರನೊಂದಿಗೆ ಗ್ರಾಮ್ಯಕ ದೇಶಕ್ಕೆ ಹೋಗಿ ಬರುತ್ತಿದ್ದ. ನಿರ್‌ಋತಿ ಎಂಬ

ಇನ್ನೊಂದು ಪಶ್ಚಿಮದ ದ್ವಾರದಿಂದ ಲುಬ್ಧಕನೆಂಬ ಮಿತ್ರನೊಂದಿಗೆ ವೈಶಸ ದೇಶಕ್ಕೆ ಹೋಗಿ ಬರುತ್ತಿದ್ದ. ಇಬ್ಬರು ಅಂಧರು ನಿರ್ವಾಕ್ಯ, ಉಪಸ್ಕರ ಎಂಬುವರು ರಾಜನಿಗೆ ಸಹಾಯಕರು. ರಾಜ ಕಣ್ಣಿರುವ ನರರಿಗೆಲ್ಲರಿಗೂ ಅಧಿಪತಿ ಆದರೆ ಅವನಿಗೆ ಕುರುಡರ ಸಹಾಯಬೇಕು. ಅಂತಃಪುರದಲ್ಲಿ ವಿಷೂಚಿ ಎಂಬ ಸ್ನೇಹಿತನಿದ್ದ. ಇವರೆಲ್ಲರ ಒಡತಿಯಾದ ಪುರಂಜನಿ ತನ್ನ ಹಾವಭಾವ, ವಿಲಾಸಗಳಿಂದ ರಾಜನನ್ನು ವಶಪಡಿಸಿಕೊಂಡು ಪೂರ್ತಿ ಕೈಗೊಂಬೆಯಾಗಿ ಮಾಡಿಕೊಂಡಿದ್ದಳು.

ರಾಜಾ ಪುರಂಜನ ಒಮ್ಮೆ ಬೇಟೆಯಾಡಲು ಒಂದು ರಥವನ್ನೇರಿದ. ಆ ರಥಕ್ಕೆ ಐದು ಕುದುರೆಗಳು ಎರಡು ಈಷಾದಂಡಗಳು. ಎರಡು ಚಕ್ರಗಳು, ಒಂದು ಅಚ್ಚು, ಮೂರು ಧ್ವಜಗಳು, ಐದು ಕಟ್ಟುಗಳು, ಒಂದು ಲಗಾಮು, ಒಬ್ಬ ಸಾರಥಿ, ಒಂದು ಆಸನ. ಎರಡು ನೊಗಗಳು, ಐದು ಆಯುಧಗಳು, ಏಳು ಆವರಣಗಳು. ಐದು ಬಗೆಯ ಗತಿಗಳು ಹನ್ನೊಂದು ಸೇನಾಪಡೆಗಳೊಂದಿಗೆ ರಾಜ ಪಂಚಪ್ರಸ್ಥವೆಂಬ ಕಾಡಿಗೆ ಹೊರಟ. ರಾಣಿ ಅವನ ವಿರಹವನ್ನು ಒಂದು ಕ್ಷಣವೂ ಸಹಿಸುತ್ತಿರಲಿಲ್ಲ. ಆದರೂ ರಾಜನಿಗೆ ಬೇಟೆಯ ಅಭಿಲಾಷೆ. ಹಾಗಾಗಿ ರಾಣಿಯನ್ನು ಬಿಟ್ಟು ಕಾಡಿಗೆ ಬಂದ. ನಿರ್ದಯವಾಗಿ ಮೃಗಗಳನ್ನು ಕೊಂದ. ಹಸಿವು ಬಾಯಾರಿಕೆಗಳಾಗಲು ಬಳಲಿ ಬೇಟೆ ನಿಲ್ಲಿಸಿ ಅರಮನೆಗೆ ಹಿಂತಿರುಗಿದ. ಸ್ನಾನ, ಭೋಜನಾದಿಗಳನ್ನು ಮುಗಿಸಿ ಅಷ್ಟರಲ್ಲಿ ಸಿಟ್ಟಿಗೆ ಬಂದಿದ್ದ ರಾಣಿಯನ್ನು ತೊಡೆಯ ಮೇಲಿರಿಸಿಕೊಂಡು ಮುದ್ದು ಮಾಡಿ ಸಮಾಧಾನ ಪಡಿಸಿದ. ಅವಳನ್ನು ಒಲಿಸಿಕೊಂಡು ಅವಳ ತೋಳನ್ನು ದಿಂಬಾಗಿ ಇಟ್ಟುಕೊಂಡು ಮಲಗಿದ. ಹೀಗೆ ವಿಷಯ ಭೋಗದಲ್ಲಿ ತೊಡಗಿದ ರಾಜನ ಯೌವನ ಕಾಲವೆಲ್ಲ ಅರೆಕ್ಷಣದಂತೆ ಕಳೆದು ಹೋಯಿತು. ಇಷ್ಟರಲ್ಲಿ ರಾಜನಿಗೆ 1100 ಮಂದಿ ಪುತ್ರರು, 110 ಮಂದಿ ಪುತ್ರಿಯರು ಜನಿಸಿದರು. ಎಲ್ಲರಿಗೂ ರಾಜ ವಿವಾಹ ಮಾಡಿಸಿದ. ಪುತ್ರರಿಗೆ ಒಬ್ಬೊಬ್ಬರಿಗೆ 100 ಜನ ಪುತ್ರರು ಹೀಗೆ ಇಡೀ ಪಾಂಚಾಲದೇಶದಲ್ಲಿ ಪುರಂಜನನ ವಂಶ ಹರಡಿತು. ರಾಜ ಇನ್ನೂ ಹೆಚ್ಚಿನ ವಿಷಯಾಸೆಯಿಂದ ಕಾಮ್ಯಯಜ್ಞಗಳಲ್ಲಿ ಘೋರವಾದ ಪಶು ಹಿಂಸೆನಡೆಸಿದ. ದೇವ, ಪಿತೃ, ಭೂತಗಳನ್ನೂ ಆರಾಧಿಸಿದ. ಅಷ್ಟರಲ್ಲಿ ಮುಪ್ಪಿನ ಕಾಲ ಬಂದೇ ಬಿಟ್ಟಿತು. ನೆರೆ ರಾಜ್ಯದಲ್ಲಿ ಆಗ ಚಂಡವೇಗ ಗಂಧರ್ವ ಆಳುತ್ತಿದ್ದ. ಅವನಿಗೆ ಬಲಿಷ್ಠರಾದ 360 ಗಂಧರ್ವ ಸೈನಿಕರಿದ್ದರು. ಅವರಿಗೆ ಅಷ್ಟೇ ಸಂಖ್ಯೆಯಲ್ಲಿ ಗಂಧರ್ವಿಯರು ಜೊತೆಗಿದ್ದರು. ಅವರು ಒಬ್ಬೊಬ್ಬರಾಗಿ ಬಂದು ಪುರಂಜನನ ಪಟ್ಟಣವನ್ನು ಲೂಟಿ ಮಾಡುತ್ತಿದ್ದರು. ಹೀಗೆ ರಾಜ ಪುರಂಜನ ನೂರು ವರ್ಷಗಳವರೆಗೆ ಸತತವಾಗಿ ಏಕಾಕಿಯಾಗಿ 720 ಗಂಧರ್ವ, ಗಂಧರ್ವಿಯರೊಡನೆ ಹೋರಾಡಿ ಬಲಗುಂದಿದ.

ಚಂಡವೇಗನೆಂಬ ಗಂಧರ್ವಾಧಿಪತಿಯಾದ ಕಾಲಾಭಿಮಾನಿಗೆ ಜರೆ ಎಂಬ ಮಗಳಿದ್ದಳು. ಅವಳು ಸುಂದರಿಯಾಗಿರಲಿಲ್ಲ ಆದ್ದರಿಂದ ಅವಳು ಅವಿವಾಹಿತೆಯಾಗಿ ಉಳಿದಿದ್ದಳು. ಅವಳು ಪುರಂಜನನನ್ನು ಮದುವೆಯಾಗಲು ಬೇಡಿಕೊಂಡಾಗ ರಾಜ ತಿರಸ್ಕರಿಸಿದ. ಭಯ ಎಂಬ ಯವನರಾಜನ ಬಳಿಗೆ ಕಳಿಸಿಕೊಟ್ಟ. ಅವನು ತನ್ನ ಅಣ್ಣ ಪ್ರಜ್ವಾರನ ಬಳಿಗೆ ಕಳಿಸಿದ. ಪ್ರಜ್ವಾರ ಜರೆಯರು ಮದುವೆಯಾದರು. ಜರೆಯು ಜನರಿಗೆ ತಿಳಿಯದಂತೆ ಅವರ ಶರೀರ ಪ್ರವೇಶಿಸಿ ಸುಖ ಅನುಭವಿಸತೊಡಗಿದಳು. ಯವನರಾಜನು ಪ್ರಜ್ವಾರ ಜರೆಯರ ಸಹಾಯದಿಂದ ಆಧಿವ್ಯಾಧಿಗಳೆಂಬ ಸೈನಿಕರೊಂದಿಗೆ ಈ ಲೋಕದಲ್ಲಿ ಯಾರಿಗೂ ತಿಳಿಯದಂತೆ ಸಂಚರಿಸುತ್ತ ಇರುತ್ತಾನೆ.

ಪುರಂಜನನ ಪಟ್ಟಣವನ್ನು ಜರೆ ಪ್ರವೇಶಿಸಿ ಯಾರಿಗೂ ತಿಳಿಯದಂತೆ ಭೋಗಿಸತೊಡಗಿದಳು. ಯವನನ ಸೈನಿಕರಾದ ಆಧಿವ್ಯಾಧಿಗಳು ನುಗ್ಗಿ ಪಟ್ಟಣವನ್ನು ಹಾಳುಗೈದರು. ಗಂಧರ್ವ ಗಂಧರ್ವಿಯರ ದಾಳಿಯಿಂದ, ಜರೆಯ ಪ್ರವೇಶದಿಂದ ರಾಜ ಪುರಂಜನ ಬಲಹೀನನಾದ. ಅವನ ಪರಿವಾರದವರು ಅವನನ್ನು ಹಿಂದಿನಂತೆ ಆದರಿಸಲಿಲ್ಲ, ಅವನಿಗೂ ಜರೆಯ ಪ್ರಭಾವದಿಂದ ವಿಷಯಭೋಗದಲ್ಲಿ ಏನೂ ರಸವಿಲ್ಲದಂತಾಯಿತು. ಆದರೂ ವಿಷಯ ಸುಖವನ್ನೇ ಬಯಸಿದ. ಭಗವಂತನ ಜ್ಞಾನವನ್ನು ಬಯಸಲಿಲ್ಲ, ಹೆಂಡತಿ, ಮಕ್ಕಳು ಪರಿವಾರದವರನ್ನು ಒಲಿಸಿಕೊಳ್ಳಲು ಯತ್ನಿಸಿದ. ಒಂದು ದಿನ ಯವನರು ಪಟ್ಟಣವನ್ನು ಮುತ್ತಿದರು - ಪ್ರಜ್ವಾರ ಇಡೀ ಪಟ್ಟಣವನ್ನು ಸುಡತೊಡಗಿದ. ಹಣ್ಣು ಮುದುಕನಾದ ರಾಜ ಅವನ ಜೊತೆ ಹೋರಾಡಲಾರದವನಾದ. ಪತ್ನೀ ಪುತ್ರರ ಬಗ್ಗೆ ಶೋಕ ಮಾಡಿದ. ಅಷ್ಟರಲ್ಲಿ ಯವನರಾಜ ಭಯ ಅಲ್ಲಿಗೆ ಬಂದಿದ್ದ. ಅವನು ರಾಜನನ್ನು ಪಶುವಿನಂತೆ ಎಳೆದೊಯ್ದ. ಸರ್ಪವೂ ಯವನರ ಆಕ್ರಮಣವನ್ನು ಎದುರಿಸಲಾರದೇ ಪಟ್ಟಣದಿಂದ ಹೊರಗೆ ಹೋಯಿತು. ಕೂಡಲೇ ಪಟ್ಟಣ ನೆಲಸಮವಾಯಿತು. ಮೃತ್ಯು ತನ್ನನ್ನು ಎಳೆಯುತ್ತಿರುವಾಗ ರಾಜ ತನ್ನ ಮಿತ್ರನಾದ ಅವಿಜ್ಞಾತ ಸಖನನ್ನು ನೆನೆಯಲೇ ಇಲ್ಲ. ರಾಣಿ ಪುರಂಜನಿಯನ್ನೇ ನೆನೆಸಿದ. ಬಳಿಕ ರಾಜ ನರಕದಲ್ಲಿ ಪೀಡೆ ಅನುಭವಿಸಿ ಪುನರ್ಜನ್ಮದಲ್ಲಿ ವಿದರ್ಭರಾಜನ ಮಗಳು ವೈದರ್ಭಿಯಾಗಿ ಜನಿಸಿದ. ರಾಣಿಯು ಪಾಂಡ್ಯರಾಜ ಮಲಯಧ್ವಜನಾಗಿ ಜನಿಸಿದಳು. ಇಬ್ಬರೂ ವಿವಾಹ ಮಾಡಿಕೊಂಡರು. ಮಲಯಧ್ವಜನಿಗೆ ವೈದರ್ಭಿಯಲ್ಲಿ ಏಳು ಜನ ಪುತ್ರರೂ ಒಬ್ಬ ಕನ್ಯೆಯೂ ಜನಿಸಿದರು-ರಾಜ ತನ್ನ ಅಂತ್ಯಕಾಲದಲ್ಲಿ ರಾಜ್ಯವನ್ನು ಮಕ್ಕಳಿಗೆ ಒಪ್ಪಿಸಿ ಮಲಯಪರ್ವತದಲ್ಲಿ ತಪಸ್ಸುಮಾಡಿ ಶರೀರ ತ್ಯಾಗ ಮಾಡಿದ. ವೈದರ್ಭಿ ಶೋಕವನ್ನು ತಡೆಯಲಾರದೇ ದುಃಖಿಸುತ್ತ ಪತಿಯ ಚಿತೆಯಲ್ಲಿ ಸಹಗಮನ ಮಾಡಲು ಉದ್ಯುಕ್ತಳಾದಳು. ಆಗ ಅವಿಜ್ಞಾತನೆಂಬ ಮಿತ್ರನು

ಬ್ರಾಹ್ಮಣರೂಪದಿಂದ ಬಂದು ನೀನು ಹೆಣ್ಣಲ್ಲ. ನಾವಿಬ್ಬರೂ ಮಾನಸ ಸರೋವರದಲ್ಲಿ ವಿಹರಿಸುತ್ತಿದ್ದ ಹಂಸಗಳು. ನೀನು ನನ್ನನ್ನು ಮರೆತುದರ ಪರಿಣಾಮವಾಗಿ ಪುರಂಜನನಾಗಿ ಜನಿಸಿದೆ. ಬಳಿಕ ವೈದರ್ಭಿಯಾದೆ. ಈಗ ಶೋಕವನ್ನು ಬಿಟ್ಟು ಸ್ವತಂತ್ರನಾದ ಭಗವಂತನಲ್ಲಿ ಮನಸ್ಸಿಟ್ಟು ತತ್ವಜ್ಞಾನವನ್ನು ಹೊಂದಿ ಸುಖಿಯಾಗು'' ಎಂದು ಉಪದೇಶಿಸಿದನು.

ಪುರಂಜನನ ಕಥೆ ಕೇವಲ ಕಾಲ್ಪನಿಕವಲ್ಲ. ನಡೆದ ಸಂಗತಿಯೇ ಆಗಿದೆ. ಆದರೂ ಈ ಕಥೆಯಲ್ಲಿ ಅಧ್ಯಾತ್ಮವು ತುಂಬಿದೆ. ಜೀವನ ಶರೀರದ ಹೃದಯವೆಂಬ ಮಾನಸ ಸರೋವರದಲ್ಲಿ ಜೀವ ಪರಮಾತ್ಮನೆಂಬ ಇಬ್ಬರು ಹಂಸಗಳು ಮಿತ್ರರು. ಪರಮಾತ್ಮನೆಂಬ ಹಂಸವೇ ಅವಿಜ್ಞಾತ ಮಿತ್ರ, ಜೀವಹಂಸವೇ ಪುರಂಜನ ರಾಜ. (ಪುರಂ ಶರೀರಂ ಜನಯತಿ ಇತಿ ಪುರಂಜನಃ) ಬುದ್ಧಿಯೇ ರಾಣಿ ಪುರಂಜನಿ. ಜೀವನಿಗೆ ಶಬ್ದಾದಿ ವಿಷಯಗಳು ಅನುಭವಿಸಲು ಯುಕ್ತವಾದ ಮಾನವ ಶರೀರವೇ ನವದ್ವಾರವುಳ್ಳ ಪಟ್ಟಣ. ಈ ಪಟ್ಟಣದಲ್ಲಿ ಬುದ್ಧಿಯೆಂಬ ರಾಣಿಯ ಸಹಾಯದಿಂದ ವಿಷಯ ಪದಾರ್ಥಗಳಲ್ಲಿ ಅಭಿಮಾನ ಪಟ್ಟು ಭೋಗಿಸುತ್ತ ಜೀವನು ಪರಮಾತ್ಮನನ್ನು ಮರೆಯುತ್ತಾನೆ. ಬುದ್ಧಿ ರಾಣಿಗೆ ಜ್ಞಾನ, ಕರ್ಮೇಂದ್ರಿಯಗಳು ಹತ್ತುಜನ ಭೃತ್ಯರು ಅವರಿಗೆ ಮುಖ್ಯ ಭೃತ್ಯನೆಂದರೆ ಮನಸ್ಸು, ಪ್ರಾಣಾಪಾನಾದಿ ಪಂಚರೂಪೀ ಮುಖ್ಯಪ್ರಾಣನೇ ಐದು ಹೆಡೆಗಳ ಸರ್ಪ. ನಿದ್ರೆಯಲ್ಲಿಯೂ ಶರೀರವೆಂಬ ಪಟ್ಟಣವನ್ನು ರಕ್ಷಿಸುವುದು ಈ ಸರ್ಪ. 2 ಕಣ್ಣು 2 ಕಿವಿ, 2 ಮೂಗಿನ ಹೊರಳೆಗಳು, ಬಾಯಿ, ಮೂತ್ರದ್ವಾರ, ಮಲದ್ವಾರಗಳು ಒಟ್ಟು ನವದ್ವಾರಗಳೆನಿಸಿವೆ. ಈ ದ್ವಾರಗಳಿಂದ ರಾಜ ಹೊರಗೆ ಹೋಗುವುದೆಂದರೆ ಜೀವನ ವಿಷಯಭೋಗ. ವಿಭ್ರಾಜಿತ, ಸೌರಭ ದೇಶಗಳೆಂದರೆ ರೂಪ, ಗಂಧಗಳು ದ್ಯುಮಂತ, ಅವಧೂತರೆಂಬ ಮಿತ್ರರೇ ಕಣ್ಣುಮತ್ತು ಕಿವಿಗಳು, ವಿಪಣವೇ ವಾಗಿಂದ್ರಿಯ ರಸಜ್ಞವೇ ರಸನೇಂದ್ರಿಯ. ಆಪಣವೆಂದರೆ ಮಾತನಾಡುವದು. ಬಹೂದನವೆಂದರೆ ಚಿತ್ರಾನ್ನ ಸವಿಯುವದು. ಶ್ರುತಧರ ಎಂದರೆ ಶ್ರೋತ್ರೇಂದ್ರಿಯ. ದೇವಭೂ ಎಂದರೆ ಬಲಗಿವಿ. ಪಿತೃಭೂ ಎಂದರೆ ಎಡಗಿವಿ. ಪ್ರವೃತ್ತ ಕರ್ಮಭೋಧಕ ಶಾಸ್ತ್ರವೇ ಉತ್ತರ ಪಾಂಚಾಲದೇಶ. ನಿವೃತ್ತಕರ್ಮವನ್ನು ಬೋಧಿಸುವ ಶಾಸ್ತ್ರವೇ ದಕ್ಷಿಣ ಪಾಂಚಾಲದೇಶ. ಎಡ ಬಲಕಿವಿಗಳಿಂದ ಉತ್ಕ್ರಮಣ ಹೊಂದುವವನು ಕ್ರಮವಾಗಿ ಪಿತೃಯಾನ, ದೇವಯಾನ ಮಾರ್ಗಗಳಿಂದ ಹೋಗುತ್ತಾನೆ. ದುರ್ಮದ ಎಂದರೆ ಜನನೇಂದ್ರಿಯ. ಅದರಿಂದ ರತಿಸುಖ ಅನುಭವಿಸುವದೇ ಗ್ರಾಮ್ಯಕದೇಶ.

ಉಬ್ಧಕ ಎಂದರೆ ಮಲವಿಸರ್ಜನೇಂದ್ರಿಯ ಆದರಿಂದ ಮಲವಿಸರ್ಜಿಸುವುದೇ ವೈಶಸದೇಶ. ಕಣ್ಣಿಲ್ಲದ ಸಹಾಯಕರು ಇಬ್ಬರು ಹಸ್ತ, ಪಾದ ಇಂದ್ರಿಯಗಳು. ರಥ ಎಂದರೆ ದೇಹ. ಅದಕ್ಕೆ ಇಂದ್ರಿಯಗಳೇ ಕುದುರೆಗಳು. ಪುಣ್ಯ ಪಾಪಕರ್ಮಗಳೇ ಚಕ್ರಗಳು. ಮನಸ್ಸು ಲಗಾಮು. ಬುದ್ಧಿ ಸಾರಥಿ. ಹೃದಯವೇ ಆಸನ. ಸಪ್ತಧಾತುಗಳು ಏಳು ಆವರಣಗಳು. ಹನ್ನೊಂದು ಸೇನಾಪಡೆಗಳೆಂದರೆ ಇಂದ್ರಿಯ ವ್ಯಾಪಾರಗಳು ಜೀವಮಾನದಲ್ಲಿ ಬರುವ ಪ್ರತಿಯೊಂದು ಸಂವತ್ಸರವೇ ಚಂಡವೇಗ. ವೇಗದಿಂದ ವರ್ಷಗಳು ಉರುಳುತ್ತವೆ. ಹಗಲು ರಾತ್ರಿಗಳೇ ಗಂಧರ್ವ, ಗಂಧರ್ವಿಯರು. ಇವರು ಕ್ರಮವಾಗಿ ಒಬ್ಬೊಬ್ಬರೇ ಬಂದು ಶರೀರದ ಶೋಭೆಯನ್ನು ಹಾಳುಗೆಡವುತ್ತಾರೆ. ಜರೆ ಎಂದರೆ ಮುಪ್ಪು. ಈ ಕನ್ಯೆಯನ್ನು ಯಾರೂ ವರಿಸಲು ಇಷ್ಟಪಡುವುದಿಲ್ಲ. ಭಯವೇ ಮೃತ್ಯು. ಅವನ ಸೈನಿಕರು ಆಧಿ ವ್ಯಾಧಿಗಳು ಪ್ರಜ್ವಾರ ಎಂದರೆ ಶರೀರವನ್ನು ದಹಿಸುವ ನಾನಾ ವಿಧವಾದ ಜ್ವರ.

ಹೂದೋಟದಲ್ಲಿ ಎಳೆ ಚಿಗುರು ಹುಲ್ಲನ್ನು ಮೇಯುವ ಹೆಣ್ಣು ಗಂಡು ಜಿಂಕೆಗಳು ದುಂಬಿಗಳ ನಾದಕ್ಕೆ ಕಿವಿಗೊಟ್ಟು ಮೈಮರೆಯುತ್ತವೆ. ಮುಂದೆ ತೋಳಗಳಿವೆ. ಹಿಂದೆ ಬೇಡನು ಬಾಣ ಹೂಡಿ ನಿಂತಿದ್ದಾನೆ. ಹಾಗೆಯೇ ಜೀವನು ವಿಷಯ ಸುಖಗಳಲ್ಲಿ ಮೈಮರೆತು ಮುಂದೆ ಆಯುಷ್ಯವನ್ನು ಹರಣ ಮಾಡುವ ಕಾಲಚಕ್ರ, ಹಿಂದೆ ಕೊಲ್ಲಲು ನಿಂತಿರುವ ಮೃತ್ಯುಗಳನ್ನು ಗಮನಿಸುವುದೇ ಇಲ್ಲ.

ಆದ್ದರಿಂದ ವಿಷಯಾಸಕ್ತಿಯನ್ನು ಬಿಟ್ಟು, ನಾನು ನನ್ನದೆಂಬ ದುರಭಿಮಾನವನ್ನು ಬಿಟ್ಟು ಭಗವಂತನ ಜ್ಞಾನವನ್ನು ಹೊಂದಿ ಅಪರೋಕ್ಷಜ್ಞಾನದ್ವಾರಾ ಮೋಕ್ಷವನ್ನು ಪಡೆಯಬೇಕು.



# ಜೀವನ ವ್ಯಾಪ್ತಿ ದೇಹದಲ್ಲಿ ಹೇಗೆ?

"ಅಣುರ್ಹ್ಯೇಷ ಆತ್ಮಾ" ಜೀವನು ಅಣುವಾಗಿದ್ದಾನೆ ಎಂಬುದಾಗಿ ಗೌಪವನಶ್ರುತಿಯು ಹೇಳುತ್ತಿದೆ;. ಜೀವನು ಅಣುವಾದ ಪಕ್ಷದಲ್ಲಿ ಸರ್ವಗತ ಸ್ಪರ್ಶಜ್ಞಾನವೂ ಬರುವುದು ಹೇಗೆ? ಎಂಬ ಪ್ರಶ್ನೆ ಸಹಜವೇ.

ಅಣುವೇ ಆದ ಜೀವನಿಗೆ ಸರ್ವಶರೀರದಲ್ಲಿ ತುಂಬಿಕೊಂಡಿರುವುದು ಯುಕ್ತವಾಗುತ್ತದೆ. ಹೇಗೆಂದರೆ, ಒಂದು ಸ್ಥಳದಲ್ಲಿ ಕೆಳಗೆ ಬಿದ್ದ ಒಂದು ತೊಟ್ಟು ಶ್ರೀಗಂಧ ತೈಲವು - ಆ ಪ್ರದೇಶವನ್ನೆಲ್ಲ ಗಂಧದ ವಾಸನೆಯಿಂದ ಹೇಗೆ ವ್ಯಾಪಿಸುವದೋ ಹಾಗೆ ಜೀವನು ಅಣುವಾದರೂ ತನ್ನ ದೇಹವನ್ನೆಲ್ಲ ವ್ಯಾಪಿಸಿಕೊಂಡಿರುತ್ತಾನೆ. ಶ್ರೀಗಂಧ ತೈಲದ ತೊಟ್ಟಿನಂತೆ ತನ್ನ ಶರೀರವನ್ನು ವ್ಯಾಪಿಸಿಕೊಂಡು ಜೀವನು ವಿಷಯಗಳನ್ನು ಅನುಭವಿಸುತ್ತಾನೆ. ಎಂಬುದಾಗಿ ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ.[1]

ಒಂದು ಸ್ಥಿರ ಸ್ಥಾನವಿರುವಿಕೆಯಿಂದ ಒಂದು ಕಡೆ ಚೆನ್ನಾಗಿ ಇರುವುದು ಮತ್ತೊಂದು ಕಡೆ ಪರಿಮಳವಿರುವುದು ಶ್ರೀಗಂಧಕ್ಕೆ ಒಪ್ಪುತ್ತದೆ. ಹಾಗೆ ಜೀವನಿಗೆ ಸ್ಥಾನವಿಲ್ಲವಾದ್ದರಿಂದ ನೀವು ಕೊಟ್ಟಿರುವ ದೃಷ್ಟಾಂತ ಒಪ್ಪುವದಿಲ್ಲ ಎಂಬುದು ಸರಿಯಲ್ಲ. ಏಕೆಂದರೆ "ಹೃದಿ ಏಷ ಆತ್ಮಾ" ಎಂಬುವ ಶ್ರುತಿಗನುಸಾರವಾಗಿ ಜೀವನಿಗೂ ಹೃದಯ ಸ್ಥಾನವನ್ನು ಒಪ್ಪಿರುವುದರಿಂದ ಇದು ಕೂಡುತ್ತದೆ.[2]

ಹೇಗೆ ದೀಪಕ್ಕೆ ಬೆಳಗುವ ಗುಣದಿಂದ ವ್ಯಾಪ್ತಿಯು, ದೀಪರೂಪದಿಂದ ಏಕತ್ರ ಇರುವಿಕೆಯು ಕೂಡುವದೋ, (ಹಾಗೆ) ಅದೇ ರೀತಿ ಜೀವನ ಜ್ಞಾನಗುಣ ಧರ್ಮದಿಂದ ವ್ಯಾಪ್ತಿಯು, ಜೀವರೂಪದಿಂದ ಏಕತ್ರ ಇರುವಿಕೆಯು ಒಪ್ಪುತ್ತದೆ. ದೇವತೆಗಳು ಸಾಂಶತಾ. ನಿರಂಶತಾ, ಎಂಬ ಎರಡು ಪ್ರಕಾರದಿಂದ ವ್ಯಾಪ್ಯ ವ್ಯಾಪಕ ಭಾವವುಳ್ಳವರು. ಮನುಷ್ಯಾದಿ ಜೀವರು ಚಿದ್ಗುಣ (ಜ್ಞಾನ) ದಿಂದ ವ್ಯಾಪ್ತರು, ಸ್ವರೂಪದಿಂದ ಅಲ್ಲ.

---

1. ಅಣೋರಪಿ ಜೀವಸ್ಯ ಸರ್ವಶರೀರ ವ್ಯಾಪ್ತಿರ್ಯುಜ್ಯತೇ । ಯಥಾ ಹರಿಚಂದನ ವಿಪ್ರುಷ ಏಕದೇಶ ಪತಿತಾಯಾಃ ಸರ್ವಶರೀರವ್ಯಾಪ್ತಿಃ । ಅಣುಮಾತ್ರೋಽಯಂ ಜೀವಃ ಸ್ವದೇಹಂ ವ್ಯಾಪ್ಯತಿಷ್ಠತಿ । ಯಥಾ ವ್ಯಾಪ್ಯ ಶರೀರಾಣಿ ಹರಿಚಂದನ ವಿಪ್ರುಷಃ । ಇತಿ ಚ ಬ್ರಹ್ಮಾಂಡ ಪುರಾಣೇ ॥

(ಓಂ ಅವಿರೋಧಶ್ಚಂದನವತ್ ಓಂ । 2-3-24 ಈ ಸೂತ್ರದ ಭಾಷ್ಯದಲ್ಲಿ ನೋಡಬಹುದು.)

2. ಸಮ್ಯಗಸಮ್ಯಗವಸ್ಥಾನವಿಶೇಷಾದ್ಯುಜ್ಯತೇ ಹರಿಚಂದನಸ್ಯ ಇತಿ ಚೇನ್ನ ) " ಹೃದಿ ಏಷ ಆತ್ಮಾ" ಇತಿ ಜೀವಸ್ಯಾಪಿ ತಥಾ ಅಭ್ಯುಪಗಮಾತ್ ॥

(ಓಂ ಅವಸ್ಥಿತಿ ವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ ಓಂ ॥ 2-3-25 ಸೂತ್ರ ಭಾಷ್ಯ)

ಜೀವನ ಗುಣಕ್ಕೆ ಸ್ವಾಭೇದವೇ ಇರುವುದರಿಂದ ಜೀವನ ವ್ಯಾಪ್ತಿ ಎಂಬುದು ಯುಕ್ತವಾಗುತ್ತದೆ. ದೇವತೆಗಳಿಗೆ ಸ್ವಶಕ್ತಿ ಸಂಬಂಧದಿಂದ ಅನೇಕ ವಿಧಗಳಾದ ವ್ಯವಸ್ಥಿತಿಯು ಕೂಡುತ್ತದೆ.[3]

ಸಕಲ ಜೀವರೂ ಅಣುಗಳೇ. ದೇವತಾ ಜೀವರುಗಳಲ್ಲಿ ವ್ಯಾಪ್ತ್ಯಾದಿಗಳು ಶಕ್ತಿ ಭೇದದಿಂದ ಬೇರೆ ಬೇರೆಯಾಗಿವೆ. ಜೀವನು ಚಿದ್ರೂಪದಿಂದ ಅಣುವಾದರೂ ಪ್ರಕಾಶರೂಪದಿಂದ ದೇಹದಲ್ಲಿ ವ್ಯಾಪ್ತನಾಗಿ ಇರುತ್ತಾನೆ. (ಓಂ ಗುಣಾದ್ವಾಽಽ-ಲೋಕವತ್ ಓಂ ॥ 2-3-26 ಸೂತ್ರಭಾಷ್ಯ)



3. ಯಥಾಽಽಲೋಕಸ್ಯ ಪ್ರಕಾಶಗುಣೇನವ್ಯಾಪ್ತಿರ್ಜ್ಯೋತಿರೂಪೇಣ ಅವ್ಯಾಪ್ತಿಃ ಏವಂ ಚಿದ್ಗುಣೇನ ವ್ಯಾಪ್ತಿರ್ಜೀವರೂಪೇಣ ಅವ್ಯಾಪ್ತಿರಿತಿವಾ । ಸ್ಕಾಂದೇಚ -ಅಸಮ್ಯಕ್ಸಮ್ಯಗಿತಿ ಚ ಹ್ಯವಸ್ಥಾ ಭೇದತಃ ಸುರಾಃ । ವ್ಯಾಪ್ತಿ ಅವ್ಯಾಪ್ತಿಯುತಾಸ್ತ್ವನ್ಯೇ ಚಿದ್ಗುಣೇ ನೈವ ನಾನ್ಯಥಾ । ಚಿದ್ಗುಣಸ್ಯ ಸ್ವರೂಪತ್ವಾತ್ ತದ್ವ್ಯಾಪ್ತಿಶ್ಚೇತಿ ಯಜ್ಯತೇ । ಶಕ್ತಿ ಯೋಗಾತ್ಸುರಾಣಾಂತು ವಿವಿಧಾಚ ವ್ಯವಸ್ಥಿತಿಃ ಇತಿ ॥

# ಜೀವನ ಹೃದಯಕಮಲದಲ್ಲಿ ಭಗವಂತನ - ಮೂರು ರೂಪಗಳು.

ಜೀವನ ಹೃದಯಕಮಲದ ಮಧ್ಯದಲ್ಲಿ ಭಗವಂತನ ಅಗ್ರೇಶ - ಪ್ರಾದೇಶ ಮೂಲೇಶ ಎಂಬ ಮೂರು ರೂಪಗಳಿವೆ.

**1. ಅಗ್ರೇಶನ ಸ್ಥಾನ -**

**ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರ ಸ್ಥಿತೇ ಹರೌ ।**
**ಪ್ರವಿಶಂತಿ ಸುಷುಪ್ತೌ ತು ಪ್ರಬುದ್ಧ್ಯಂತೇ ತತಸ್ತಥಾ ॥**

ಹೃದಯಕಮಲದ ಕರ್ಣಿಕಾಗ್ರಭಾಗದಲ್ಲಿ ಜೀವನ ಸ್ಥೂಲದೇಹದ ಅಂಗುಷ್ಠ ಪ್ರಮಾಣದ ಪರಿಮಾಣದಲ್ಲಿ ಜೀವನ ಬಿಂಬರೂಪವಿದೆ. ಈ ಬಿಂಬರೂಪವನ್ನು ಅಗ್ರೇಶ, ಹರಿ, ಪ್ರಾಜ್ಞ, ಪುರುಷ, ಜೀವಕಲಾ ಎಂಬುದಾಗಿ ನಾನಾ ನಾಮಗಳಿಂದ ಶಾಸ್ತ್ರಗಳಲ್ಲಿ ಕರೆಯಲಾಗಿದೆ. ಅಗ್ರೇಶನು ಎಂಟು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ,ಮುಸಲ, ಖಡ್ಗ, ಧನುಸ್ ಜ್ಯಾಗಳನ್ನುಧರಿಸಿದ್ದಾನೆ. ಈ ಬಿಂಬರೂಪಿಯೇ ಹಂಸಪಕ್ಷಿರೂಪದಲ್ಲಿ ಹಂಸನಾಮಕವಾಗಿ ಜೀವನ ಶ್ವಾಸೋಚ್ಛ್ವಾಸ ಮುಖ್ಯಪ್ರವರ್ತಕನಾಗಿ ಹಂಸರೂಪಿಯಾದ ಪ್ರಾಣದೇವರ ಸಮೇತವಾಗಿ ಹೃದಯ ಕಮಲದ ಎಂಟುದಳಗಳಲ್ಲಿ ಸಂಚರಿಸುತ್ತಾನೆ. ಈ ಸಂದರ್ಭದಲ್ಲಿ ಜೀವನಿಗೆ ನಾನಾಅವಸ್ಥೆಗಳು ಉಂಟಾಗುತ್ತವೆ.

**ಪೂರ್ವದಲೇ ಪುಣ್ಯಬುದ್ಧಿ ರಗ್ನೌ ನಿದ್ರಾಕ್ಷುಧಾದಿಕಮ್ ।**
**ಯಾಮ್ಯದಲೇ ಕ್ರೂರಬುದ್ಧಿರ್ನೈರ್ಋತ್ಯಾಂ ಪಾಪಬುದ್ಧಿಕೃತ್ ॥**

**ವಾರುಣ್ಯಾಂ ಚ ಪರಿಕ್ರೀಡಾ ವಾಯವ್ಯಾಂ ಗಮನಾಗಮೌ ।**
**ಕೌಬೇರ್ಯಾಂ ರತಿಬುದ್ಧಿಃ ಸ್ಯಾದೀಶಾನ್ಯೇ ದ್ರವ್ಯ ದಾನಕೃತ್ ॥**

**ಮಧ್ಯೇವೈರಾಗ್ಯಬುದ್ಧಿಃಸ್ಯಾತ್ ಸ್ವಪ್ನಾವಸ್ಥಾ ತು ಕೇಸರೇ ॥**
**ಜಾಗ್ರತ್ ಜ್ಞೇಯಾ ಕರ್ಣಿಕಾಯಾಂ ಲಿಂಗೇಚೈವ ಸುಷುಪ್ತಿಕೃತ್ ॥**

- ಮೂರ್ತಿತತ್ತ್ವ

ಪೂರ್ವದಳದಲ್ಲಿ - ಪುಣ್ಯಬುದ್ಧಿಯಿಂದ ಐಶ್ವರ್ಯಪ್ರಾಪ್ತಿ.
ಆಗ್ನೇಯ ದಳದಲ್ಲಿ - ನಿದ್ರಾವಸ್ಥೆ ಹಾಗೂ ಹಸಿವೆ ಬಾಯಾರಿಕೆಗಳು
ದಕ್ಷಿಣ ದಳದಲ್ಲಿ - ಕ್ರೂರಬುದ್ಧಿ, ಅಧಾರ್ಮಿಕ ವ್ಯಾಪಾರಗಳು,
ನೈಋತ್ಯದಳದಲ್ಲಿ - ಪಾಪಬುದ್ಧಿಯಿಂದ ಅಧಾರ್ಮಿಕ ವ್ಯಾಪಾರಗಳು.
ಪಶ್ಚಿಮದಳದಲ್ಲಿ - ಕ್ರೀಡಾ ಬುದ್ಧಿಯಿಂದ ಮನಸ್ಸಂತೋಷ.
ವಾಯವ್ಯದಳದಲ್ಲಿ - ಗಮನಾಗಮನ ವ್ಯಾಪಾರ ಹಾಗೂ ಜ್ಞಾನ ಪ್ರಾಪ್ತಿ.
ಉತ್ತರದಲ್ಲಿ - ಭೋಗಾಸಕ್ತಿ, ಹಾಗೂ ದ್ರವ್ಯದಾನೇಚ್ಛೆಗಳು.
ಈಶಾನ್ಯದಲ್ಲಿ - ದಾನ ಬುದ್ಧಿಯಿಂದ ವೈರಾಗ್ಯ.

ಜೀವನು ಬಿಂಬರೂಪಿಯ ಸಹಿತವಾಗಿ ಪದ್ಮಮಧ್ಯದಲ್ಲಿ ಬಂದಾಗಲೂ ವೈರಾಗ್ಯಬುದ್ಧಿ ಉಂಟಾಗುತ್ತದೆ. ಕೇಸರದಲ್ಲಿ ಜಾಗ್ರದವಸ್ಥೆ ಉಂಟಾಗುತ್ತದೆ. ಹಾಗೂ ಪದ್ಮ ವಿಕಸನಗೊಂಡಾಗಲೂ ಸಹ. ಹೃದಯದಲ್ಲಿರುವ ಪ್ರಾಜ್ಞನು ಜೀವನ ಸಮೇತವಾಗಿ ಹೃದಯದಿಂದ ಕಂಠಕ್ಕೆ ಬಂದು ಅಲ್ಲಿಂದ ಕಣ್ಣಿಗೆ ಬರುತ್ತಾನೆ. ಇಲ್ಲಿರುವ ವಿಶ್ವನಾಮಕ ಹರಿಯಲ್ಲಿ ಐಕ್ಯ ಪಡೆಯುತ್ತಾನೆ. ಈ ಸಂದರ್ಭವೂ ಜೀವನಿಗೆ ಜಾಗ್ರದವಸ್ಥೆಯನ್ನು ತಂದು ಕೊಡುತ್ತದೆ. ಕರ್ಣಿಕಾದಲ್ಲಿ ಸ್ವಪ್ನಾವಸ್ಥೆ. ಇದು ಕಮಲ ಮುದುಡಿದಾಗಲೂ ಸಹ ಇರುತ್ತದೆ. ಚಕ್ಷುಸ್ಥಾನದಲ್ಲಿರುವ ವಿಶ್ವನ ಸಮೇತವಾಗಿ ಕಂಠಸ್ಥಾನಕ್ಕೆ ಬಂದಾಗ ಅಲ್ಲಿರುವ ತೈಜಸರೂಪೀಹರಿಯ ಸಂಯೋಗವಾಗುವದು. ಈಗ ಜೀವನಿಗೆ ಸ್ವಪ್ನಾವಸ್ಥೆ ಬರುತ್ತದೆ. ಇಲ್ಲಿಂದ ತೈಜಸ - ವಿಶ್ವರ ಸಹಿತವಾಗಿ ಕಂಠಸ್ಥಾನದಿಂದ ಹೃದಯಕ್ಕೆ ಬಂದಾಗ ಸುಷುಪ್ತಾವಸ್ಥೆ ಉಂಟಾಗುವದು.

1. ವಿಶ್ವ- ಚಕ್ಷುಸ್ - ಜಾಗ್ರದವಸ್ಥೆ.
2. ತೈಜಸ - ಕಂಠ - ಸ್ವಪ್ನಾವಸ್ಥೆ
3. ಪ್ರಾಜ್ಞ - ಹೃದಯ - ಸುಷುಪ್ತ್ಯವಸ್ಥೆ.

**2. ಮೂಲೇಶನ ಸ್ಥಾನ -**

ಹೃತ್‌ಕರ್ಣಿಕಾಮೂಲಗತಃ ಸ್ವಾಂಗುಷ್ಠಾಗ್ರ ಪ್ರಮಾಣಕಃ ।
ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥
(ಬೃಹದ್ಭಾಷ್ಯೇ ಬ್ರಹ್ಮತರ್ಕವಚನಮ್)

ಹೃದಯಕಮಲದ ಕರ್ಣಿಕೆಯ ತುದಿಯಲ್ಲಿ ಅಗ್ರೇಶನಿದ್ದರೆ ಕರ್ಣಿಕೆಯ ಮೂಲಭಾಗದಲ್ಲಿ ಜೀವನ ಸ್ಥೂಲದೇಹದ ಅಂಗುಷ್ಠಾಗ್ರ ಪರಿಮಾಣದಲ್ಲಿ ಮೂಲೇಶನಿದ್ದಾನೆ. ಮೂಲೇಶನಿಗೆ "ವಿಜ್ಞಾನಾತ್ಮಾ" ಎಂದೂ ಹೆಸರಿದೆ. ಮೂಲೇಶನ ಪಾದಭಾಗದಲ್ಲಿ ಲಾಳುಕ ನಾಮಕ ಪ್ರಾಣದೇವರು ಪೂರ್ವಾಭಿಮುಖವಾಗಿ ಕೈಜೋಡಿಸಿ ಕೊಂಡಿದ್ದಾರೆ. ಇಂದ್ರ, ವೈಕುಂಠ ಮುಂತಾದ ನಾಮಗಳಿಂದ ಪ್ರಾಣದೇವರನ್ನು ದೇವತೆಗಳು ಉಪಾಸನೆ ಮಾಡುತ್ತಾರೆ. ಪ್ರಾಣದೇವರು ಒಂದು ದಿನದಲ್ಲಿ 21,600 ಬಾರಿ ಹಂಸಮಂತ್ರವನ್ನು ಜೀವನ ಶ್ವಾಸೋಚ್ಛ್ವಾಸ ರೂಪದಿಂದ ತಾವೂ ಮಾಡುತ್ತ ಜೀವನಿಂದಲೂ ಮಾಡಿಸುತ್ತಿದ್ದಾರೆ. ಇವರ ಪಾದದಡಿಯಲ್ಲಿ ಜೀವನಿದ್ದಾನೆ.

ಈ ಜೀವನ ಸ್ವರೂಪ ಹೀಗಿದೆ.

ಸೂಕ್ಷ್ಮಸೃಷ್ಟಿಕಾಲದಲ್ಲಿ ಅನಿರುದ್ಧರೂಪೀ ಹರಿಯಿಂದ 14 ಕಲಾಯುಕ್ತವಾದ ಸ್ವಾವರಣ ರೂಪವಾದ ದೇಹವನ್ನು (ಅನಿರುದ್ಧ ದೇಹವನ್ನು) ಜೀವ ಪಡೆದಿದ್ದಾನೆ. ಈ ದೇಹದಲ್ಲಿ ಅನಿರುದ್ಧ ರೂಪವಿದೆ. ಅನಿರುದ್ಧದೇಹದ ಒಳಭಾಗದಲ್ಲಿ ಆವರಣರೂಪವಾಗಿ 16 ಕಲೆಗಳಿಂದ ಕೂಡಿದ ಲಿಂಗದೇಹವಿದೆ. ಇದರಲ್ಲಿ ಕೇಶವಾದಿ ಷೋಡಶ ರೂಪಗಳಿವೆ. ಈ ಲಿಂಗದೇಹಕ್ಕೆ ನಿಯಾಮಕವಾದ ವಾಸುದೇವ ರೂಪವಿದೆ. ಇದಕ್ಕೆ ಪುರುಷ ಎಂದೂ ಹೆಸರಿದೆ. ಈ ಲಿಂಗದೇಹದ ಒಳಗೆ ಜೀವ ಇದ್ದಾನೆ.

ಜೀವ ಸ್ವರೂಪದ ಚಿತ್ರ –

1. ಅನ್ನಮಯ ಕೋಶ 2. ಪ್ರಾಣಮಯಕೋಶ 3. ಮನೋಮಯಕೋಶ 4. ವಿಜ್ಞಾನಮಯಕೋಶ. 5.ಆನಂದಮಯಕೋಶ 6. ಅನಿರುದ್ಧದೇಹ 7. ಲಿಂಗದೇಹ 8. ಜೀವ.

ಒಳಗಿರುವ ಜೀವನಿಗೆ 7 ಆವರಣಗಳು ಸೂಕ್ಷ್ಮವಾಗಿ ಇರುವವು ಕಣ್ಣಿಗೆ ಕಾಣುವ ಸ್ಥೂಲದೇಹವೇ "ಅನ್ನಮಯಕೋಶ" ವೆಂದು ಕರೆಸಿಕೊಳ್ಳುತ್ತದೆ. ಸ್ಥೂಲದೇಹದಲ್ಲಿರುವ ಆವರಣಗಳು ಹೀಗಿವೆ.

1.ತ್ವಕ್ 2.ಚರ್ಮ 3. ಮಾಂಸ 4.ರಕ್ತ 5.ಮೇದಸ್ 6.ಮಜ್ಜಾ 7.ಅಸ್ಥಿ 8. ಜೀವನ ಸೂಕ್ಷ್ಮದೇಹ.

ಸ್ಥೂಲದೇಹದ ರೋಮಕೂಪಗಳಲ್ಲಿ ಹಿಂಕಾರನಾಮಕ ಪ್ರದ್ಯುಮ್ನ
ತ್ವಗಾವರಣದಲ್ಲಿ ಪ್ರಸ್ತಾವನಾಮಕ ಅನಿರುದ್ಧ.
ಚರ್ಮದಲ್ಲಿ ಪ್ರತೀಹಾರನಾಮಕ ಸಂಕರ್ಷಣ.
ಮಾಂಸದಲ್ಲಿ ಉದ್ಗೀಥನಾಮಕ ವಾಸುದೇವ ಹಾಗೂ ನಾರಾಯಣ .
ರಕ್ತದಲ್ಲಿ ನಿಧನನಾಮಕ ಸಂಕರ್ಷಣ, ಶಾಂತಸಂವಿತ್.
ಮೇದಸ್ಸಿನಲ್ಲಿ ವಷಟ್‌ಕಾರ ಹಾಗೂ ಷಡ್ಗುಣ.
ಮಜ್ಜಾದಲ್ಲಿ ಆದಿವರಾಹ ಹಾಗೂ ಸಾರಾತ್ಮ
ಅಸ್ಥಿಯಲ್ಲಿ ಉಪದ್ರವನಾಮಕ ನಾರಸಿಂಹ ಹಾಗೂ ಹಂಸ.

ಈ ರೂಪಗಳಿಂದ ಭಗವಂತ ತ್ವಗಾದಿಸಪ್ತಧಾತುಗಳು ಹಾಗೂ ಕೋಶರೂಪಗಳಿಗೆ ನಿಯಾಮಕನಾಗಿರುತ್ತಾನೆ. ಇದರಲ್ಲಿಯೂ ಪುನಃ ಮಜ್ಜಾದಲ್ಲಿ 360 ರೂಪಗಳು, ಅಸ್ಥಿಯಲ್ಲಿ 360 ರೂಪಗಳು ಹಾಗೂ ಅಂಗುಲಿ ಪರ್ವಗಳಲ್ಲಿ 360 ಕೂಡಿಸಿ 1080 ವಿಶೇಷ ರೂಪಗಳು ಇವೆ. ಸ್ಥೂಲ ದೇಹವೇ ಅನ್ನಮಯ ಕೋಶವೆನಿಸಿಕೊಳ್ಳುತ್ತದೆ. ಇದರ ಒಳಗೆ ಸೂಕ್ಷ್ಮವಾಗಿರುವ ಆರು ಆವರಣಗಳೇ ಪ್ರಾಣಮಯ ಕೋಶಾದಿ ಆವರಣಗಳು. ಅದರಲ್ಲಿಯೂ ಲಿಂಗದೇಹದೊಳಗಿರುವ ಜೀವ ಸ್ವರೂಪಕ್ಕೆ ಮತ್ತೆ 6 ಆವರಣಗಳು, 1. ಭಾವರೂಪ ಅವಿದ್ಯಾ 2. ಕಾಮ 3. ಪ್ರಾರಬ್ಧಕರ್ಮ 4. ಪ್ರಕೃತಿ (ಸ್ವಗುಣಾಚ್ಛಾದಿಕಾ) 5.ಪರಮಾಚ್ಛಾದಿಕಾರೂಪವಾದ ದುಷ್ಟ ಜಡಪ್ರಕೃತಿ, 6. ಈಶ್ವರೇಚ್ಛಾ

ಹೀಗೆ ಸ್ವರೂಪದೇಹಕ್ಕೆ ಆವರಕವಾಗಿರುವ ಪ್ರಾಣಮಯಕೋಶಾದಿ ಸಪ್ತ ಆವರಣಗಳು ಹಾಗೂ ಸ್ಥೂಲದೇಹಾವರಕವಾದ ತ್ವಗಾದಿ ಸಪ್ತಧಾತ್ವಾವರಣಗಳು ಶಾಸ್ತ್ರದಲ್ಲಿ ನಿರ್ದಿಷ್ಟವಾಗಿವೆ. ಸ್ಥೂಲದೇಹ, ಅನಿರುದ್ಧದೇಹ, ಲಿಂಗದೇಹ, ಸ್ವರೂಪದೇಹಗಳಲ್ಲಿ 24 ತತ್ತ್ವಾವರಣಗಳು ಬ್ರಹ್ಮಾಂಡಕ್ಕೆ ಇರುವ ಕ್ರಮದ ವ್ಯತ್ಕ್ರಮದಲ್ಲಿವೆ.

**3. ಪ್ರಾದೇಶದ ಸ್ಥಾನ -**

**ಹೃದಯೇ ಸರ್ವೇಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।**

ಬೃಹದ್ಭಾಷ್ಯದ ಉಕ್ತಿಯಂತೆ ಹೃದಯದಲ್ಲಿ ಸರ್ವತ್ರವ್ಯಾಪ್ತವಾಗಿ ಜೀವನ ಪ್ರಾದೇಶ ಪರಿಮಿತನಾಗಿ ಪ್ರಾದೇಶ ಎಂಬ ಹೆಸರಿನಿಂದ ಪುರುಷರೂಪೀ ಶ್ರೀಹರಿಯು ಇದ್ದಾನೆ.

ನಾಲ್ಕು ಕೈಗಳಲ್ಲಿ ಕಮಲ, ಚಕ್ರ, ಶಂಖ, ಗದೆಗಳನ್ನು ಧರಿಸಿದ್ದಾನೆ. ಈ ರೂಪವನ್ನು ಯೋಗಿಗಳು ಯಾವಾಗಲೂ ಧ್ಯಾನಯೋಗದಿಂದ ಚಿಂತಿಸುತ್ತಾರೆಂದು ಭಾಗವತದಲ್ಲಿ ಹೇಳಿದೆ.

**ಕೇಚಿತ್ ಸ್ವದೇಹಾಂತರ್ಹೃದಯಾವಕಾಶೇ**
**ಪ್ರಾದೇಶಮಾತ್ರಂ ಪುರುಷಂ ವಸಂತಮ್ ।**
**ಚತುರ್ಭುಜಂ ಕಂಜರಥಾಂಗ ಶಂಖ**
**ಗದಾಧರಂ ಧಾರಣಯಾ ಸ್ಮರಂತಿ** (ಶ್ರೀಮದ್ಭಾಗವತ 2-2-8)



# ಜೀವನ ದೇಹದಲ್ಲಿ ನಾಡಿಗಳು

ಜೀವನ ಸ್ಥೂಲದೇಹದಲ್ಲಿ ವೃಷಣ - ಪೃಷ್ಠಭಾಗಗಳ ಮಧ್ಯೆ ಇರುವ ಗುದ ಅಧಃ ಪ್ರದೇಶವನ್ನು ಯೋಗಶಾಸ್ತ್ರದ ಪ್ರಕಾರ "ಕಂದ" ಎಂದು ಕರೆಯುತ್ತಾರೆ. ಇದು 4 ಅಂಗುಲ ವಿಸ್ತಾರ, 2 ಅಂಗುಲ ಉದ್ದ ಹಾಗೂ ವರ್ತುಲಾಕಾರದಲ್ಲಿದೆ. ಎಲ್ಲ ನಾಡಿಗಳಿಗೂ ಇದು ಮೂಲಭೂತ ಆಧಾರವಾದ್ದರಿಂದ "ಮೂಲಾಧಾರ" ವೆಂದು ಇದಕ್ಕೆ ಹೆಸರಿದೆ 'ಆಸ್ಥಾನ'ವೆಂದೂ ಕೆಲವು ಕಡೆ ಹೆಸರಿಸಲಾಗಿದೆ. ಈ ಕಂದ ಮಧ್ಯದೇಶದಿಂದ ಆರಂಭಿಸಿ ಶಿರಸ್ಸಿನ ಪರ್ಯಂತವಾಗಿ ಋಜುವಾಗಿ ಬಿದಿರಿನಂತೆ ಇರುವ ಸೂಕ್ಷ್ಮವಾದ ಪ್ರಧಾನನಾಡಿಯೇ ಸುಷುಮ್ನಾ. ಇದಕ್ಕೆ ಬ್ರಹ್ಮನಾಡೀ ಎಂದೂ ಹೆಸರುಂಟು. ಕೂದಲಿನ ಸಾವಿರದ ಒಂದು ಭಾಗದಷ್ಟು(1/1000) ಸೂಕ್ಷ್ಮವಾಗಿರುವ ಇದರ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಅಂಶಗಳು ಇವೆ.

ಮೂಲಾಧಾರಂ ಸಮಾರಭ್ಯ ಯಾವನ್ಮೂರ್ಧಾನಮಾಸ್ಥಿತಾ ।
ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾಽಽಯಾರ್ಯ ಪ್ರಕಾಶಿನೀ ।
ವೈದ್ಯುತಾ ಬ್ರಹ್ಮನಾಡೀತು ಸೈವ ಪಂಚ ಪ್ರಭೇದಿನೀ ॥ ತಂತ್ರಸಾರ

ವಜ್ರಿಕಾ, ಆರ್ಯಾ, ಪ್ರಕಾಶಿನೀ ಮತ್ತು ವೈದ್ಯುತಾ ಎಂಬುದಾಗಿ ಈ ಪಂಚಾಂಶಯುಕ್ತವಾದ ಸುಷುಮ್ನಾನಾಡಿಯ ಹೊರಗೆ ನಾಲ್ಕು ದಿಕ್ಕುಗಳಲ್ಲಿ ಇಡಾ, ಪಿಂಗಳಾ, ವಜ್ರಿಕಾ, ಧಾರಿಣೀ ಎಂಬ ನಾಲ್ಕು ನಾಡಿಗಳಿವೆ. ಈ ನಾಡಿಗಳೂ ಶಿರ ಪರ್ಯಂತವಾಗಿವೆ. ಈ ಇಡಾದಿ ಭಿನ್ನನಾಡಿಗಳಲ್ಲಿ ಹೃದಯದ ಸ್ಥಾನದಲ್ಲಿ ಮಾತ್ರ ಪದ್ಮವಿದೆ. ಅದರಲ್ಲಿ ವಹ್ನಿಮಂಡಲ, ರವಿ ಮಂಡಲ, ಚಂದ್ರಮಂಡಲಗಳಿವೆ. ಅಲ್ಲಿ ವಾಸುದೇವಾದಿ ಚತುರ್ಮೂರ್ತಿಗಳಿವೆ. ಪಂಚಾಂಶ ಯುಕ್ತವಾದ ಸುಷುಮ್ನಾನಾಡಿಯಲ್ಲಿ ಪಂಚವರ್ಣದ ಪಂಚಭಗವದ್ರೂಪಗಳು ಇವೆ.

ಮಧ್ಯಾಂಶ ಬ್ರಹ್ಮನಾಡ್ಯಾಂ ತು ಧ್ಯೇಯೋ ನಾರಾಯಣೋಽರುಣಃ ।
ತತ್ಪುರಾಂಶ ಪ್ರಕಾಶಿನ್ಯಾಂ ವಾಸುದೇವೋಽಸಿತ ಪ್ರಭಃ ॥
ದಕ್ಷಾಂಶ ವೈದ್ಯುತಾ ಸಂಸ್ಥಃ ಪಿಂಗಃ ಸಂಕರ್ಷಣೋಽಚ್ಯುತಃ ।
ಪೃಷ್ಟಾಂಶ ವಜ್ರಿಕಾ ಸಂಸ್ಥಃ ಪ್ರದ್ಯುಮ್ನೋ ಹರಿತಃ ಪ್ರಭಃ ॥
ಆರ್ಯಕಾಯಾಂ ಗತಶ್ಚಿಂತ್ಯೋ ನೀಲವರ್ಣೋಽನಿರುದ್ಧಕಃ ।

ಮಾನಸಸ್ಮೃತಿ.

ಪೂರ್ವದಿಕ್ಕಿನ ಪ್ರಕಾಶಿನೀ ನಾಡಿಯಲ್ಲಿ ಭೂಃ ಎಂಬ ವ್ಯಾಹೃತಿ ವಾಚ್ಯವಾದ (ಸ್ಫಟಿಕ) ಶುಕ್ಲವರ್ಣದ ವಾಸುದೇವಮೂರ್ತಿ.

ದಕ್ಷಿಣದಿಕ್ಕಿನ ವೈದ್ಯುತಾ ನಾಡಿಯಲ್ಲಿ ಭುವಃ ಎಂಬ ವ್ಯಾಹೃತಿ ವಾಚ್ಯವಾದ ಪಿಂಗಳ ವರ್ಣದ ಸಂಕರ್ಷಣಮೂರ್ತಿ.

ಪಶ್ಚಿಮದಿಕ್ಕಿನ ವಜ್ರಿಕಾ ನಾಡಿಯಲ್ಲಿ ಸ್ವಃ ಎಂಬ ವ್ಯಾಹೃತಿ ವಾಚ್ಯವಾದ (ಪೀತ) ಹರಿದ್ವರ್ಣದ ಪ್ರದ್ಯುಮ್ನಮೂರ್ತಿ.

ಉತ್ತರ ದಿಕ್ಕಿನಲ್ಲಿ ಆಯಾನಾಡಿಯಲ್ಲಿ ಮಹಃ ಎಂಬ ವ್ಯಾಹೃತಿವಾಚ್ಯವಾದ (ಶ್ಯಾಮ) ನೀಲವರ್ಣದ ಅನಿರುದ್ಧಮೂರ್ತಿ.

ಮಧ್ಯಭಾಗದ (ಬ್ರಹ್ಮನಾಡೀ) ಸುಷುಮ್ನಾನಾಡಿಯಲ್ಲಿ (ಅರುಣ) ರಕ್ತವರ್ಣದ ನಾರಾಯಣಮೂರ್ತಿ.

ಇಡೀ ದೇಹದಲ್ಲಿ ಹತ್ತು ಸ್ಥಾನಗಳಿವೆ. 1. ಮೂಲಾಧಾರ 2. ನಾಭಿ 3. ನಾಭ್ಯೂರ್ಧ್ವಭಾಗ, 4. ಹೃದಯ 5. ಹೃದಯೋರ್ಧ್ವಭಾಗ (ಉರಸ್) 6.ಕಂಠ 7. ತಾಲುಮೂಲ 8.ಭ್ರೂಮಧ್ಯ 9. ಬ್ರಹ್ಮರಂಧ್ರ (ಮಸ್ತಕ) 10. ಶಿರೋರ್ಧ್ವಭಾಗ.

ಈ ಎಲ್ಲ ಸ್ಥಾನಗಳಲ್ಲಿ ಸುಷುಮ್ನಾ ಪ್ರಭೇದದ ಐದು ನಾಡಿಗಳಲ್ಲಿ ಕಮಲಗಳಿವೆ. ಅವುಗಳಲ್ಲಿ ಅನೇಕ ಭಗವದ್ರೂಪಗಳು, ಲಕ್ಷ್ಮೀರೂಪಗಳು, ದೇವತೆಗಳು, ಅಕ್ಷರಗಳು, ವೇದಗಳು, ಮರುತ್ತರು ಮುಂತಾದವರು ಇದ್ದಾರೆ. ಇದರಲ್ಲಿ ಪ್ರಧಾನವಾದದ್ದು ಹೃದಯ ಕಮಲ. ಇದರಲ್ಲಿನ ಭಗವದ್ರೂಪ ಚಿಂತನ ಅತ್ಯಾವಶ್ಯಕವಾದ್ದರಿಂದ ಹೃದಯ ಕಮಲದ ಸ್ವರೂಪವೇ ಹೆಚ್ಚಾಗಿ ನಿರೂಪಿತವಾಗಿದೆ.

### 1. ಮೂಲಾಧಾರ ಪದ್ಮ ಸ್ವರೂಪ

ಈ ಮೂಲಾಧಾರದಿಂದಾರಂಭಿಸಿ ಶಿರೋರ್ಧ್ವಭಾಗ ಪರ್ಯಂತ ಇರುವ ಐದು ನಾಡಿಗಳಲ್ಲಿ ಆಯಾ ಸ್ಥಾನಗಳಲ್ಲಿ ವಿಭಿನ್ನದಳಗಳ ವಿಭಿನ್ನ ಸಂಖ್ಯೆಯ ಕಮಲಗಳಿವೆ. ಅದರಲ್ಲಿ ಮೂಲಾಧಾರದಲ್ಲಿರುವ ಐದು ನಾಡಿಗಳಲ್ಲಿ ಐದು ಪದ್ಮಗಳಿವೆ. ಐದೂ ಪದ್ಮಗಳ ವರ್ಣಕೆಂಪು. ಐದು ಪದ್ಮಗಳಲ್ಲಿ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ, ನಾರಾಯಣ ಎಂಬ ಐದು ಭಗವದ್ರೂಪಗಳು ಹಾಗೂ ಐದು ತ್ರಿಕೋಣಾಕಾರ ವಹ್ನಿಮಂಡಲಗಳಿವೆ. ವಾಸುದೇವಾದಿ ಪಂಚಭಗವದ್ರೂಪಗಳು ಹೊರತಾಗಿ ಐದೂ ನಾಡಿಗಳಲ್ಲಿ ಅನಿರುದ್ಧರೂಪವಿದೆ.

ಇಲ್ಲಿ ಅಪಾನನಾಮಕ ಪ್ರಾಣ ಹಾಗೂ ಏಳು ಮರುತ್ತರು ಇರುತ್ತಾರೆ. ಈ ಐದು ಪದ್ಮಗಳಲ್ಲಿ ಪ್ರತ್ಯೇಕವಾಗಿ ನಾಲ್ಕು ದಳಗಳಿವೆ. ಅದರಲ್ಲಿ ಪ್ರತಿಯೊಂದರಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವಣವೇದಗಳು, ಬೃಹಸ್ಪತಿ, ಸೋಮ, ಬುಧ, ಶನೈಶ್ಚರ ಎಂಬ ನಾಲ್ಕು ದೇವತೆಗಳು ವ,ಶ,ಷ,ಸ ಎಂಬ ನಾಲ್ಕು ಬೀಜಾಕ್ಷರಗಳೂ ಇವೆ.

**ನಾಭಿ ಪದ್ಮ ಸ್ವರೂಪ-**

ಮೂಲಾಧಾರದಿಂದ ಮೇಲೆ ಬಂದರೆ ನಾಭಿದೇಶ. ಇಲ್ಲಿರುವ ಪಂಚನಾಡಿಗಳಲ್ಲಿ ಐದು ಪದ್ಮಗಳು. ಪದ್ಮಗಳ ವರ್ಣ ಅರುಣ. ಇದರಲ್ಲಿ ಮೂಲಾಧಾರ ಪದ್ಮದಲ್ಲಿದ್ದಂತೆ ವಾಸುದೇವಾದಿ ಪಂಚಭಗವದ್ರೂಪ, ಐದು ಷಟ್ಕೋಣಾಕಾರದ ವಾಯು ಮಂಡಲಗಳಿವೆ. ಅಲ್ಲಿ ಮೂಲಾಧಾರಸ್ಥ ಪದ್ಮದಲ್ಲಿದ್ದಂತೆ ವಾಸುದೇವಾದಿ ಪಂಚ ಭಗವದ್ರೂಪಗಳಿವೆ. ವಿಶೇಷ ಭಗವದ್ರೂಪ ಪ್ರದ್ಯುಮ್ನ. ಇವರ ಉಪಾಸಕನು ಗಣಪತಿ.

ಈ ಆಯುಧಧಾರಿಯಾದ ಪ್ರದ್ಯುಮ್ನರೂಪವೇ ನಾಭಿದೇಶದ ಮೇಲ್ಭಾಗದಲ್ಲಿನ ಸುಷುಮ್ನಾನಾಡಿಯ ಸೂರ್ಯಮಂಡಲದಲ್ಲಿದ್ದು ನಿಷಾದರೂಪದ ದೈತ್ಯಸಂಹಾರ ಹಾಗೂ 360 ದಿನಾಭಿಮಾನಿ ದೇವತೆಗಳ ಪಾಲನಾರೂಪ ಕಾರ್ಯನಿರ್ವಾಹಕವಾಗಿದೆ. ಈ ಪ್ರದ್ಯುಮ್ನನು ದೇಹದಲ್ಲಿರುವ ಪಾಪಪುರುಷನನ್ನು ವಾಯುಮಂಡಲದಲ್ಲಿದ್ದು ಒಣಗಿಸುತ್ತಾನೆ. ಈ ಸಮಯದಲ್ಲಿ ಜೀವನು ನಾಡೀ ವಿಶೇಷದಲ್ಲಿ ಇರುವುದರಿಂದ ಅವನಿಗೆ ಪಾಪ ಪುರುಷನಿಗಾಗುವ ಶೋಷಣಾದಿಗಳು ಆಗುವುದಿಲ್ಲ.

ಇದರಲ್ಲಿರುವ ಪದ್ಮಗಳ ದಳಗಳ ಸಂಖ್ಯೆ ಆರು. ಇದರಲ್ಲಿ ನೀಲಾ, ಭದ್ರಾ, ಮಿತ್ರವೃಂದಾ, ಕಾಲಿಂದೀ, ಜಾಂಬುವತೀ, ಲಕ್ಷಣಾ ಎಂಬ ಶ್ರೀಕೃಷ್ಣನ ಷಣ್ಮಹಿಷಿಯರು ಹಾಗೂ ಬ, ಭ, ಮ, ಯ, ರ, ಲ ಎಂಬ ಆರು ಬೀಜಾಕ್ಷರಗಳು ಇವೆ. ಇದಕ್ಕೆ ಅಂತರಿಕ್ಷಲೋಕವೆಂದು ಹೆಸರು ಸಮಾನನಾಮಕ ಪ್ರಾಣ, ಹಾಗೂ ಏಳು ಮರುತ್ತರು ಇದ್ದಾರೆ.

**ನಾಭ್ಯೂರ್ಧ್ವಭಾಗ ಪದ್ಮಸ್ವರೂಪ-**

ನಾಭಿದೇಶದಿಂದ ಸ್ವಲ್ಪ ಮೇಲು ಭಾಗದಲ್ಲಿ ಒಂದು ಪದ್ಮ. ಇದರ ವರ್ಣ ರಕ್ತ ಇದರಲ್ಲಿ ವಾಸುದೇವಾದಿ ಪಂಚರೂಪ ಹಾಗೂ ಸಪ್ತಮರುತ್ತರು ಇರುತ್ತಾರೆ. ಪದ್ಮದ

ದಳಗಳ ಸಂಖ್ಯೆ ಹತ್ತು ಅದರಲ್ಲಿ ಡ,ಢ,ಣ, ತ,ಥ,ದ,ಧ, ನ, ಪ,ಫ ಎಂಬ ಹತ್ತು ಅಕ್ಷರಗಳಿವೆ. (ಈ ಪದ್ಮವನ್ನು ಕೆಲವರು ಮಾತ್ರ ಅಂಗೀರಿಸುತ್ತಾರೆ.)

**ಹೃದಯಾಕಾಶ ಸ್ವರೂಪ**

ನಾಭಿಯ ಊರ್ಧ್ವಭಾಗದಿಂದ 10 ಅಂಗುಲದ ಮೇಲೆ ಹೃದಯಾಕಾಶವಿದೆ. ಇದಕ್ಕೆ ದಹರಾಕಾಶವೆಂದು ಹೆಸರು ಇದರಲ್ಲಿ ಭಗವಂತನ ಪಟ್ಟಣವಿದೆ. ಇದರಲ್ಲಿ ವೈಶ್ವಾನರ ಮಂಟಪವಿದೆ.

ಈ ಮಂಟಪದ ನಾಲ್ಕೂ ದಿಕ್ಕಿನಲ್ಲಿ ಪ್ರತ್ಯೇಕ ನಾಲ್ಕುದ್ವಾರಗಳು ಹಾಗೂ ದ್ವಾರಪಾಲಕರು ಇದ್ದಾರೆ.

ಪೂರ್ವದ್ವಾರೇಷು ಪ್ರಥಮೇ ಮಹಾಲಕ್ಷ್ಮೀಃ ಪ್ರಕೀರ್ತಿತಾ ॥
ದ್ವಿತೀಯೇ ದ್ಯುಪದೋಕ್ತಾಯಾ ಭಾರತೀ ಚ ತೃತೀಯಕೇ ॥
ಸೂರ್ಯಃ ಪ್ರಾಣಃ ಚಕ್ಷುರಿತಿ ತ್ರಿರೂಪೀ ವರ್ತತೇ ರವಿಃ ।
ಜಯಶ್ಚ ವಿಜಯಶ್ಚೇತಿ ಚರಮ ದ್ವಾರಗೌ ಸ್ಮೃತಾ ।
ದಕ್ಷಿಣೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ದ್ವಿಪರಾಭಿದಾ ॥
ಬಲ ಪ್ರಬಲ ಸಂಜ್ಞೌ ತೌ ದ್ವಾರಸ್ಥೌ ಚರಮಸ್ಥಿತೌ ।
ಪಶ್ಚಿಮೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ಪೃಥಿವೀ ಸ್ಥಿತಾ ॥
ಇತೀರಿತಾ ಭಾರತೀ ಚ ತೃತೀಯೇಽಗ್ನಿರಪಾನಕಃ ।
ವಾಕ್ಚೇತಿ ರೂಪ ತ್ರಿತಯ ಯುಕ್ತಿಸ್ತತ್ರಾಸ್ತಿ ಪಾವಕಃ ॥
ನಂದೇ ಚ ಸುನಂದೇ ಚ ಚತುರ್ಥ ದ್ವಾರ ಸಂಸ್ಥಿತೌ ।
ಉತ್ತರೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ಭಾರತೀ ಸ್ಮೃತಾ ॥
ತೃತೀಯೇಂದ್ರಃ ಸಮಾನಶ್ಚ ಮನಶ್ಚೇತಿ ತ್ರಿನಾಮಕಃ ।
ವಾಸವೋಽಪಿ ಚತುರ್ಥೇ ತು ಕುಮುದ ಕುಮುದಾಕ್ಷಕಃ ॥

ಅಧ್ಯಾತ್ಮ ಮಾಲಿಕಾ

ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದ್ವಾರಗಳಲ್ಲಿ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ಭಗವದ್ರೂಪಗಳಿವೆ. ನಾಲ್ಕು ದಿಕ್ಕಿನ ನಾಲ್ಕು ದ್ವಾರಪಾಲಕರ ಸಂಖ್ಯೆ 16.

ಪೂರ್ವದ್ವಾರದಲ್ಲಿರುವ ನಾಲ್ಕು ಬಾಗಿಲುಗಳಲ್ಲಿ ಕ್ರಮವಾಗಿ ಲಕ್ಷ್ಮೀ ದೇವಿ, ದ್ಯುನಾಮಕ ಭಾರತೀ, ಸೂರ್ಯ, ಪ್ರಾಣ, ಚಕ್ಷು ಎಂಬ ಮೂರು ಹೆಸರುಗಳಿರುವ ದಿವಾಕರ ಹಾಗೂ ಜಯವಿಜಯರು. ದಕ್ಷಿಣ ದ್ವಾರದಲ್ಲಿ ಕ್ರಮವಾಗಿ ದಿಕ್‌ನಾಮಕ ಭಾರತೀದೇವಿ, ಸೋಮ, ವ್ಯಾನ, ಶ್ರೋತ್ರ ಎಂಬ ಮೂರು ಹೆಸರಿನ ಚಂದ್ರ ಹಾಗೂ ಬಲಪ್ರಬಲರು. ಪಶ್ಚಿಮದಿಕ್ಕಿನ ನಾಲ್ಕು ಬಾಗಿಲುಗಳಲ್ಲಿ ಲಕ್ಷ್ಮೀದೇವಿ ಪೃಥಿವೀನಾಮಕ ಭಾರತೀ, ಅಗ್ನಿ, ಅಪಾನ, ವಾಕ್, ಎಂಬ ಹೆಸರಿನ ಅಗ್ನಿದೇವ ಹಾಗೂ ನಂದ, ಸುನಂದರು. ಉತ್ತರದಿಕ್ಕಿನ ನಾಲ್ಕು ಬಾಗಿಲುಗಳಲ್ಲಿ ಲಕ್ಷ್ಮೀದೇವಿ, ವಿದ್ಯುನ್ನಾಮಕ ಭಾರತೀ , ಇಂದ್ರ, ಸಮಾನ, ಮನ ಎಂಬ ಮೂರು ಹೆಸರಿನ ಇಂದ್ರದೇವ ಹಾಗೂ ಕುಮುದ, ಕುಮುದಾಕ್ಷರು (ನಾಲ್ಕೂದಿಕ್ಕಿನ ತೃತೀಯ ದ್ವಾರದಲ್ಲಿರುವ ದಿವಾಕರ ಚಂದ್ರ, ಅಗ್ನಿ ಇಂದ್ರ ಇವರುಗಳು ಕಣ್ಣು ಕಿವಿ, ಮಾತು ಮನಸ್ಸುಗಳಿಗೆ ಅಭಿಮಾನಿಗಳಾದ್ದರಿಂದ ಆಯಾ ಹೆಸರು ಬಂದಿದೆ.

**ಊರ್ಧ್ವದ್ವಾರೇ ಮಹಾಲಕ್ಷ್ಮೀಃ ಆಶಾಖ್ಯಾ ಭಾರತೀ ಸ್ಮೃತಾ ।**
**ವಾಯುಶ್ಚೋದಾನ ಸಂಯುಕ್ತೋ ವರ್ತತೇತತ್ರ ತತ್ರ ಯಃ ॥**

ಹೃದಯ ನಗರಕ್ಕೆ ಮತ್ತೊಂದು ಪ್ರಧಾನ ದ್ವಾರವೂ ಸಹ ಊರ್ಧ್ವಭಾಗದಲ್ಲಿದೆ. ಈ ಭಾಗದಲ್ಲಿರುವ ದ್ವಾರಗಳು ಮೂರು ಅವುಗಳಲ್ಲಿ ಲಕ್ಷ್ಮೀದೇವಿ, ಆಶಾನಾಮಕ ಭಾರತಿ ಹಾಗೂ ಉದಾನ ವಾಯುಗಳಿದ್ದಾರೆ.

**ಹೃದಯ ಕಮಲದ ಸ್ವರೂಪ -**

ಹೃದಯಕಾಶದ ಒಳಗೆ ಪಂಚನಾಡಿಗಳಲ್ಲಿ- ಪಂಚ ಪದ್ಮಗಳಿವೆ. ಪದ್ಮಗಳ ವರ್ಣ ಅರುಣ. ಇದರಲ್ಲಿಯೂ ವಾಸುದೇವಾದಿ ಪಂಚಭಗವದ್ರೂಪ, ತ್ರಿಕೋಣಾಕಾರದ ಐದು ವಹ್ನಿ ಮಂಡಲಗಳಿವೆ. ವಿಶೇಷ ಭಗವದ್ರೂಪ ಸಂಕರ್ಷಣ. ಪ್ರತಿಕ್ಷಣವೂ ನಾಭಿದೇಶದಲ್ಲಿ ಒಣಗಿ ಮೇಲೆ ಬಂದಿರುವ ಪಾಪಪುರುಷನ ದಹನ, ಈ ಸಂಕರ್ಷಣ ರೂಪದ ಕಾರ್ಯ. ಇಂದ್ರದೇವರು ಉಪೇಂದ್ರರೂಪೀ ಭಗವಂತನನ್ನು ಇಲ್ಲಿ ಉಪಾಸಿಸುತ್ತಾರೆ. ಲಕ್ಷ್ಮೀರೂಪ ಹಾಗೂ ಸಪ್ತಮರುತ್ತರು ಇರುತ್ತಾರೆ. ಪಂಚಪದ್ಮಗಳ ಸಂಖ್ಯೆ ಎಂಟು. ಇದರಲ್ಲಿರುವ ಭಗವದ್ರೂಪಾದಿಗಳ ವಿವರ ಹೀಗಿದೆ.

ಎಂಟು ದಿಕ್ಕುಗಳಲ್ಲಿ ಎಂಟು ದಳಗಳಿವೆ.

ಪೂರ್ವದಳ - ಉಪೇಂದ್ರ, ಶಕ್ತಿ, ಪ್ರತಿಷ್ಠಾ ಎಂಬ ಭಗವದ್ರೂಪಗಳಿವೆ. ಇದರ ಉಪಾಸಕರು ಇಂದ್ರ, ದ್ರೋಣನಾಮಕವಸು, ಕ,ಖ, ಬೀಜಾಕ್ಷರಗಳು

ಆಗ್ನೇಯದಳ - ಪರಶುರಾಮ, ಸಂವಿತ್, ಉಪಾಸಕರು ಅಗ್ನಿ, ಧ್ರುವನಾಮಕ ವಸು, ಗ ಇದು ಬೀಜಾಕ್ಷರ.

ದಕ್ಷಿಣದಳ - ಜನಾರ್ದನ, ಸ್ಫೂರ್ತಿ, ಪ್ರವೃತ್ತಿ ಉಪಾಸಕರು ಯಮ, ದೋಷ ವಸು, ಘ ,ಜ ಬೀಜಾಕ್ಷರ.

ನೈರುತ್ಯದಳ - ಹಯಗ್ರೀವ, ಕಲಾ, ಉಪಾಸಕರು ವರುಣ, ಅರ್ಕವಸು, ಚ ಬೀಜಾಕ್ಷರ,

ಪಶ್ಚಿಮ ದಳ - ಮತ್ಸ್ಯ, ವಿದ್ಯಾ, ಮತಿ, ಉಪಾಸಕರು ವಾಯು, ಅಗ್ನಿ, ವಸು, ಛ, ಜ ಬೀಜಾಕ್ಷರ,

ವಾಯವ್ಯ ದಳ - ರಾಮ, ನಿಯತಿ, ಉಪಾಸಕರು - ವಾಯು, ಪ್ರಾಣ, ಝ-ಬೀಜಾಕ್ಷರ.

ಉತ್ತರದಳ - ಕಪಿಲ, ಕಲ್ಕೀ, ಮಾಯಾ, ಕಾಲ, ಉಪಾಸಕರು ಕುಬೇರ, ದ್ಯೌನಾಮಕವಸು, ಸ, ಇ, ಟ , ಬೀಜಾಕ್ಷರ

ಈಶಾನ್ಯದಳ - ನಾರಸಿಂಹ, ಪುರುಷ, ಉಪಾಸಕರು ಈಶಾನ, ವಿಭಾವಸುನಾಮಕ ವಸು, ಠ ಬೀಜಾಕ್ಷರ.

**ಸುಷುಮ್ನಾನಾಡೀಸ್ಥ ಪ್ರಧಾನ ಕಮಲ-**

ಐದು ನಾಡಿಗಳ ಮಧ್ಯೆ ಮಧ್ಯನಾಡೀ ಸುಷುಮ್ನಾ (ಬ್ರಹ್ಮನಾಡೀ). ಈ ಹೃದಯ ದೇಶದ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ಪ್ರಧಾನ ಕಮಲವಿದೆ. ಈ ಕಮಲದ ಸ್ವರೂಪ ಹೀಗಿದೆ. ಈ ಕಮಲದ (ಪತ್ರಗಳು) ದಳಗಳು ಬಾಗಿ ಮುದುಡಿ ಕೊಂಡಿರುವುದರಿಂದ ಅಧೋಮುಖ ಕಮಲವೆಂದು ಹೆಸರು. ಕೋಮಲವಾದ ನಾಳ ಮೇಲ್ಮುಖವಾಗಿದೆಯಾದ್ದರಿಂದ ಊರ್ಧ್ವನಾಲವೆಂದೂ ಕರೆಯುತ್ತಾರೆ. ಕದಳೀ ಪುಷ್ಪದಂತೆ ಮುದುಡಿದಂತೆ ಇರುವ ಇದು ವಿಶಾಲವಾಗಿದೆ. ಈ ಕಮಲಕ್ಕೆ ಎಂಟು ದಳಗಳಿರುವಂತೆ 32 ಕೇಸರಗಳು ಇವೆ. ಈ ಕಮಲಕ್ಕೆ ಅಭಿಮಾನಿ ರಮಾದೇವಿ. ನಾಲಕ್ಕೆ ಭೂದೇವಿ ಅಭಿಮಾನಿ. (ಕಂದ) ಮೂಲಭಾಗಕ್ಕೆ ದುರ್ಗಾದೇವಿ ಅಭಿಮಾನಿ. ಸರಸ್ವತಿ ಭಾರತೀಯರು ಸಹ ಈ ಕಮಲಾಭಿಮಾನಿಗಳು. ಕೆಳಗೆ ಬಾಗಿ ಮುದುಡಿರುವ ಈ

ಕಮಲವನ್ನು ವಾಯುಬೀಜ ಹಾಗೂ ಪ್ರಣವದಿಂದ ಮೇಲಕ್ಕೆತ್ತಿ ವ್ಯಾಹೃತಿಯಿಂದ ಅಭಿಮುಖವಾಗಿ ಮಾಡಿಕೊಂಡು ಜ್ಞಾನಸೂರ್ಯನಿಂದ ಅರಳಿಸಬೇಕು. ಕೇಸರಾಭಿಮಾನಿ ಚಿತ್‌ಪ್ರಕೃತಿ. ವಾಯುದೇವರು ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಶ್ಯ, ಈಶಿತಾ, ವಶಿತಾ ಎಂಬ ಅಷ್ಟೈಶ್ವರ್ಯಾತ್ಮಕವಾದ ಎಂಟು ದಳಗಳಿಗೆ ಅಭಿಮಾನಿಗಳು.

ಈ ಎಂಟುದಳಗಳಲ್ಲಿ ಹಿಂದೆ ಹೇಳಿದ ಅಷ್ಟದಿಕ್ಪಾಲಕರು ಸ್ವಸ್ವಯೋಗ್ಯ ಭಗವದ್ರೂಪಗಳನ್ನು ಉಪಾಸನೆ ಮಾಡುತ್ತಾರೆ. ಈ ಕಮಲದಲ್ಲಿ ಲಕ್ಷ್ಮೀನಾರಾಯಣನ ಶಕ್ತಿ, ಪ್ರತಿಷ್ಠಾ ಮುಂತಾದ ರೂಪಗಳನ್ನು ಸಹ ಸಾಧಕನು ನಮಸ್ಕಾರ ಪೂರ್ವಕವಾಗಿ ಬಲ ಭಾಗದಿಂದ ಮಾಲಾಕಾರವಾಗಿ ಧ್ಯಾನಿಸಬೇಕು.

ಈ ಕಮಲದ ದಳಾಗ್ರಭಾಗದಲ್ಲಿ ದ್ವಾದಶಕೋಣ ಸೂರ್ಯಮಂಡಲದಲ್ಲಿ ಪ್ರಾಣಾಧಿಷ್ಠಾನದಲ್ಲಿ ಲಕ್ಷ್ಮೀನಾರಾಯಣ ರೂಪವಿದೆ. ಅದರಂತೆ ಕೇಸರಾಗ್ರಭಾಗದಲ್ಲಿ ವರ್ತುಲ ಸೋಮಮಂಡಲದಲ್ಲಿ ಪ್ರಾಣಾಧಿಷ್ಠಾನದಲ್ಲಿ ವಾಸುದೇವ, ಕೇಸರಾಗ್ರ ಶ್ರೀಭಾಗದಲ್ಲಿನ ತ್ರಿಕೋಣವಹ್ನಿಮಂಡಲದಲ್ಲಿ ರಕ್ತವರ್ಣದ ನಾರಾಯಣ ರೂಪಗಳೂ ಇರುತ್ತವೆ.

ಹೃದಯಕಮಲದ ಮಧ್ಯದ ಕರ್ಣಿಕಾಗ್ರಭಾಗದ ಸೋಮ - ಸೂರ್ಯ - ವಹ್ನಿಮಂಡಲಗಳ ಮಧ್ಯದಲ್ಲಿ ಕೋಟಿ ಸೂರ್ಯಕಾಂತಿಯುತವಾದ ದಿವ್ಯರಥವಿದೆ. ರಥವನ್ನು ಮುತ್ತು, ರತ್ನ ಧ್ವಜ ಪತಾಕೆಗಳಿಂದ ಅಲಂಕರಿಸಲಾಗಿದೆ. ಸ್ಫಟಿಕಮಯವಾದ ರತ್ನಾಲಂಕೃತ 100 ಸ್ತಂಭಗಳಿವೆ. ಮಲ್ಲಿಗೆ, ಕುಂದ, ಮಂದಾರ, ಕೇತಕೀ, ಸಂಪಿಗೆ ಮುಂತಾದ ಪುಷ್ಪಗಳ ಹಾರಗಳು ಸುತ್ತಲೂ ಇಳಿ ಬಿದ್ದಿವೆ. ಬಂಗಾರದ ಮತ್ಸ್ಯತೋರಣ ಕಟ್ಟಿದೆ. ಪ್ರಣವಾಕಾರದ ವಿಮಾನ, ರತ್ನ ಖಚಿತ ಕಲಶಗಳು ಮೇಲ್ಭಾಗದಲ್ಲಿವೆ. ಈ ರಥದ ಮಧ್ಯೆ ಕಲ್ಪವೃಕ್ಷ. ಅದರಲ್ಲಿ ಮಂಟಪ. ಮಂಟಪದ ಮಧ್ಯೆ ಸುವರ್ಣಮಯ ಪದ್ಮ. ಪದ್ಮದ ಮೇಲೆ ಸಹಸ್ರಮಣಿಗಳಿಂದ ಅಲಂಕರಿಸಿದ ಶೇಷಾತ್ಮಕ ಸಿಂಹಾಸನ. ಈ ಸಿಂಹಾಸನದಲ್ಲಿ ಲಕ್ಷ್ಮೀ ಸಮೇತನಾಗಿ ರಮಾನಾಥನಾಮಕ ಭಗವಂತ ನೆಲೆಸಿದ್ದಾನೆ.

ಈ ಭಗವಂತನು ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳಲ್ಲಿ ಕ್ರಮವಾಗಿ ಶ್ವೇತ, ರಕ್ತ, ಪೀತ, ಕೃಷ್ಣ ವರ್ಣಗಳನ್ನು ಪಡೆಯುತ್ತಾನೆ. ಕೃತಯುಗದಲ್ಲಿ ಚತುರ್ಬಾಹುವಾಗಿ ಕೃಷ್ಣಾಜಿನ, ಉಪವೀತ, ಅಕ್ಷಮಾಲೆ, ದಂಡ, ಕಮಂಡಲು ಧರಿಸಿರುತ್ತಾನೆ. ತ್ರೇತಾಯುಗದಲ್ಲಿ ಸ್ರುಕ್ ಸ್ರುವಾದಿಗಳನ್ನು ಮತ್ತು ಮೇಖಲ-

ವನ್ನು ಧರಿಸಿರುತ್ತಾನೆ. ದ್ವಾಪರದಲ್ಲಿ ಶಂಖ ಚಕ್ರಗದಾಪದ್ಮಧಾರಿರೂಪ. ಕಲಿಯುಗದಲ್ಲಿ ಕೃಷ್ಣರೂಪ.

**ಹೃದಯೋರ್ಧ್ವಭಾಗ ಪದ್ಮ ಸ್ವರೂಪ -**

ಹೃದಯದ ಮೇಲ್ಭಾಗದಲ್ಲಿ ಉರಸ್ ಸ್ಥಾನದಲ್ಲಿ ಶುಕ್ಲವರ್ಣದ ಒಂದು ಪದ್ಮ ಹನ್ನೆರಡುದಲೋಪೇತವಾದ ಈ ಪದ್ಮದಲ್ಲಿ ಧಾತಾ, ಅರ್ಯಮಾ, ಮಿತ್ರ, ಅಂಶು, ಭಗ, ಇಂದ್ರ. ವರುಣ, ವಿವಸ್ವಾನ್, ಪೂಷಾ, ತ್ವಷ್ಟಾ, ಪರ್ಜನ್ಯ, ವಿಷ್ಣು ಎಂಬ ದ್ವಾದಶಾದಿತ್ಯರು ಇದ್ದಾರೆ. ಹಾಗೂ ವಾಸುದೇವಾದಿ ಮೂರ್ತಿಗಳು, ಸಪ್ತಮರುತ್ತರು ಇದ್ದಾರೆ.

**ಕಂಠ ಪದ್ಮ ಸ್ವರೂಪ-**

ಹೃದಯದ ಮೇಲೆ ಕಂಠ ಪ್ರದೇಶದಲ್ಲಿ ಬ್ರಹ್ಮನಾಡಿಯ ಮಧ್ಯೆ ಒಂದು ಶುಕ್ಲವರ್ಣದ ಪದ್ಮ. 16 ದಳಗಳಲ್ಲಿ ಅಕಾರದಿಂದ ಅಃ ವರೆಗಿನ 16 ಸ್ವರಗಳೂ ಹಾಗೂ ಅಮೃತಾ ಮುಂತಾದ ಚಂದ್ರಕಲಾಭಿಮಾನಿ 16 ದೇವತೆಗಳೂ ವಾಸುದೇವಾದಿ ಪಂಚರೂಪಗಳೂ, ಸಪ್ತಮರುತ್ತರೂ ಇರುತ್ತಾರೆ. ಇಲ್ಲಿರುವ ವಿಶೇಷ ಭಗವದ್ರೂಪ ನರಸಿಂಹರೂಪ. ಇದನ್ನು ಪಾರ್ವತೀ ಸಹಿತರಾದ ರುದ್ರದೇವರು ಉಪಾಸಿಸುತ್ತಾರೆ. ಇವರೇ ಭಾವಿಶೇಷರು. ಇಲ್ಲಿ ಬ್ರಹ್ಮಾದಿ ಸಕಲ ದೇವತೆಗಳೂ ಸಹ ಸ್ವಸ್ವ ಪತ್ನೀಸಮೇತರಾಗಿ ಶ್ರೀಹರಿಯನ್ನು ಸ್ತುತಿಸುತ್ತಾರೆ.

**ತಾಲುಮೂಲ ಪದ್ಮಸ್ವರೂಪ -**

ಕಂಠದ ಮೇಲ್ಭಾಗದಲ್ಲಿ ತಾಲುಮೂಲ ಪ್ರದೇಶದಲ್ಲಿ ಶುಕ್ಲವರ್ಣದ ಪಂಚ ಪದ್ಮಗಳಿವೆ. ನಾಲ್ಕು ದಳಗಳಿರುವ ಇದರಲ್ಲಿ ಒಂದೊಂದು ದಳದಲ್ಲಿ ಒಂದೊಂದು ವೇದಗಳಿವೆ. ವರ್ತುಲಾಕಾರದ ಐದು ಚಂದ್ರಮಂಡಲಗಳಲ್ಲಿ ವಾಸುದೇವಾದಿ ಪಂಚ ಭಗವದ್ರೂಪಗಳೂ ಹಾಗೂ ಸಪ್ತಮರುತ್ತರು ಇರುತ್ತಾರೆ. ನಾರಾಯಣ ಎಂಬ ವಿಶೇಷ ಭಗವದ್ರೂಪವೂ ಇದೆ. ಉದಾನನಾಮಕ ಪ್ರಾಣದೇವರು ಸಪತ್ನೀಕರಾಗಿ ಹಂಸ ರೂಪೋಪಾಸನೆ ಮಾಡುತ್ತಿದ್ದಾರೆ. ಶೇಷದೇವರೂ ಇದರ ಅಭಿಮಾನಿಗಳಾಗಿದ್ದಾರೆ.

**ಭ್ರೂಮಧ್ಯ ಪದ್ಮ ಸ್ವರೂಪ-**

ಭ್ರೂಮಧ್ಯದಲ್ಲಿ ಶುಕ್ಲವರ್ಣದ ದ್ವಿದಲಾತ್ಮಕವಾದ ಪಂಚಪದ್ಮಗಳು, ಒಂದೊಂದು ದಲದಲ್ಲಿ ಹ, ಕ್ಷ ಎಂಬ ವರ್ಣಗಳು, ಬ್ರಹ್ಮ- ವಾಯುಗಳೂ, ತ್ರಿಕೋಣ ವಹ್ನಿಮಂಡಲ,

ವಾಸುದೇವಾದಿ ಪಂಚಭಗವದ್ರೂಪಗಳು ಇವೆ. ವಿಶೇಷ ಭಗವದ್ರೂಪ ಶ್ರೀಕೃಷ್ಣ. ಗರುಡ ದೇವರು ಉಪಾಸಕರು ಹಾಗೂ ಲಕ್ಷ್ಮೀರೂಪಗಳೂ, ಸಪ್ತಮರುತ್ತರೂ ಇದ್ದಾರೆ.

**ಬ್ರಹ್ಮರಂಧ್ರ ಪದ್ಮ ಸ್ವರೂಪ-**

ಬ್ರಹ್ಮರಂಧ್ರದಲ್ಲಿರುವ ಐದು ನಾಡಿಗಳಲ್ಲಿ ಶುಕ್ಲವರ್ಣದ 12 ಪತ್ರಗಳುಳ್ಳ ಪಂಚಪದ್ಮಗಳು. ಅಲ್ಲಿ ವರ್ತುಲಾಕಾರ ಚಂದ್ರಮಂಡಲಗಳೂ, ಅದರಲ್ಲಿ ವಾಸುದೇವಾದಿ ಭಗವದ್ರೂಪಗಳೂ ಇವೆ. ರಂಗಮೂರ್ತಿ ಎಂಬ ವಿಶೇಷ ಭಗವದ್ರೂಪ. ಸಪ್ತಮರುತ್ತರು ಸಹ ಇದ್ದಾರೆ. ಸುಷುಮ್ನಾನಾಡಿಯ ಮುಖಾಂತರ ಈ ದೇಹವನ್ನು ಸೀಳಿಕೊಂಡು ಯೋಗಿಯು ಹೊರ ಹೋಗುವದರಿಂದ ಈ ನಾಡೀ ದ್ವಾರವನ್ನು (ಬ್ರಹ್ಮರಂಧ್ರ) ವಿಧೃತೀ ಎಂದು ಕರೆಯಲಾಗುವದು. ಇಲ್ಲಿ ನಂದನ ಎಂಬ ಭಗವದ್ರೂಪ ಇರುವುದರಿಂದ 'ನಾಂದನ 'ವೆಂದೂ ಇದಕ್ಕೆ ಹೆಸರು.

**ಶಿರೋರ್ಧ್ವಭಾಗ ಪದ್ಮ ಸ್ವರೂಪ-**

ಬ್ರಹ್ಮರಂಧ್ರದ ಸ್ವಲ್ಪ ಎಡಬದಿಯಲ್ಲಿ ಒಂದು ಕಮಲವಿದೆ. ಸಹಸ್ರದಳಗಳಿವೆ. ಇದರಲ್ಲಿ ಬೃಹತೀಸಹಸ್ರ ಪ್ರತಿಪಾದ್ಯ ವಿಶ್ವಾದಿ ಸಹಸ್ರರೂಪಗಳಿವೆ. ವಾಯುದೇವರು ಸಾವಿರರೂಪಗಳಿಂದ ಇವುಗಳ ಉಪಾಸಕರಾಗಿದ್ದಾರೆ. ವಾಸುದೇವರೂಪೀ ಶ್ರೀಹರಿಯು ತುರೀಯನಾಮಕವಾಗಿ ಇಲ್ಲಿ ನಿಯಾಮಕನಾಗಿದ್ದಾನೆ. ಇದೇ ಮೋಕ್ಷಪ್ರದ ರೂಪವಾಗಿದೆ. ಈ ರೂಪವನ್ನು "ಭದ್ರ" ಎಂಬುದಾಗಿ ಐತರೇಯೋಪನಿಷತ್ ಹೆಸರಿಸುತ್ತದೆ.

ಇಂತಹ ಭಗವದ್ರೂಪಗಳನ್ನು ಯೋಗಿಗಳು ಮಾತ್ರ ನೋಡುತ್ತಾರೆ. ಮಾನಸ ಪೂಜಾ ರೂಪವಾದ ಈ ಚಿಂತನೆಯನ್ನು ಶ್ರೀಹರಿಗೆ ಸಮರ್ಪಿಸಿದ ನಂತರ ಕಾಯಿಕವಾಗಿ, ವಾಚಿಕವಾಗಿ, ಶ್ರೀಹರಿಯನ್ನು ಯಥಾಶಕ್ತಿ, ಯಥಾಮತಿ ನಮಸ್ಕರಿಸಬೇಕು. ಹೀಗೆ ಪ್ರತಿನಿತ್ಯ ದೇವ, ಋಷಿ, ಪಿತ್ರಾದಿ ಕಾರ್ಯಗಳನ್ನು ಬಿಡದೇ ತತ್ತನ್ನಾಡೀಗತ ಭಗವದ್ರೂಪ ಚಿಂತನೆ ಮಾಡುವ ಸಾಧಕನು ಜೀವನ್ಮುಕ್ತನೆಂದೇ ಕರೆಸಿಕೊಳ್ಳುತ್ತಾನೆ. (ಇದನ್ನು ದುರಾಚಾರಿಗಳು ಭಗವದ್ಭಕ್ತರಲ್ಲದವರಿಗೆ ಗುರುಗಳು ಉಪದೇಶಿಸಬಾರದು.)

(ಮುಕ್ತಿತತ್ವ ಗ್ರಂಥದಿಂದ ಆಯ್ದ ಭಾಗ)



# ಜೀವನಿಗೆ ಕರ್ತೃತ್ವ ಉಂಟೇ?

**ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।**
**ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥**

ಈ ಪ್ರಪಂಚದಲ್ಲಿ ಈಶ್ವರ, ಜೀವ, ಜಡ, ಎಂಬುದಾಗಿ ಮೂರು ಪದಾರ್ಥಗಳಿವೆ. ಇವುಗಳಲ್ಲಿ ಜಡ ಮತ್ತು ಈಶ್ವರರಿಗೆ ದುಃಖವಿಲ್ಲ, ದುಃಖವಿರಲು ಸಾಧ್ಯವೂ ಇಲ್ಲ, ಜೀವರಿಗೆ ಮಾತ್ರ ದುಃಖವೆಂದು ಪರಿಶೇಷ ಪ್ರಮಾಣದಿಂದ ಸಿದ್ಧವಾಗುತ್ತದೆ. ಈ ದುಃಖಿತರಾದ ಜೀವರ ದುಃಖ ಪರಿಹಾರಕ್ಕಾಗಿಯೇ ಶ್ರುತಿಯು ಪ್ರವೃತ್ತವಾಗಿದೆ. ಅಂದರೆ ''ಅಹರಹಃ ಸಂಧ್ಯಾಮುಪಾಸೀತ'' ''ನ ಸುರಾಂ ಪಿಬೇತ್'' ಇತ್ಯಾದಿ ವಾಕ್ಯಗಳು ಜೀವರನ್ನು ಕುರಿತು ಹೇಳಲ್ಪಟ್ಟಿವೆ.

ಎಲ್ಲ ವೇದಗಳಲ್ಲಿಯೂ ''ಸ ಹಿ ಸರ್ವಸ್ಯ ಕರ್ತಾ'', ''ನಾನ್ಯಃ ಕರ್ತಾ'' ಇತ್ಯಾದಿಯಾಗಿ ಹೇಳಲ್ಪಟ್ಟ ವಾಕ್ಯಗಳಿಂದ ಭಗವಂತನೇ ಸ್ವತಂತ್ರನೆಂದೂ, ಜೀವರು ಸ್ವತಂತ್ರ ಕರ್ತೃಗಳಲ್ಲವೆಂತಲೂ ಸ್ಫುಟವಾಗಿ ನಿರೂಪಿತವಾಗಿದೆ. ಕರ್ತೃತ್ವವೆಂದರೆ ಕ್ರಿಯಾ ಸ್ವಾತಂತ್ರ್ಯವು. ಇದು ಜೀವರಲ್ಲಿ ಇಲ್ಲವೆಂದು ನಿಷೇಧಿಸಲ್ಪಟ್ಟಂತೆ ಆಯಿತು. ಅಂದ ಮೇಲೆ ವಿಧಿ ನಿಷೇಧ ವಾಕ್ಯಗಳು ಜೀವರನ್ನು ಕುರಿತು ಪ್ರವೃತ್ತವಾಗಿಲ್ಲವೆಂದು ಹೇಳ ಬೇಕಾಗುತ್ತದೆ. ಇದರಿಂದ ಆ ವಾಕ್ಯಗಳೆಲ್ಲವೂ ವ್ಯರ್ಥವಾದವು. ಕರ್ತನೇ ಇಲ್ಲದ ಮೇಲೆ ವಿಧಿನಿಷೇಧ ವಾಕ್ಯಗಳು ನಿರರ್ಥಕವೆಂದು ಹೇಳಿದಂತೆ ಆಯಿತು. ಪುಣ್ಯ ಪಾಪಗಳು ಸಹಾ ಜೀವರಿಗೆ ಸಂಬಂಧಿಸುವವೆಂದು ಹೇಳುವದು ತಪ್ಪು ಎಂಬ ಶಂಕಾ ಬಂದರೆ ಅದು ಹಾಗಲ್ಲ ಜೀವರೂ ಕೂಡ ಕರ್ತೃಗಳೇ ಆದರೆ ಅಸ್ವತಂತ್ರ ಕರ್ತೃಗಳು ಪರಾಧೀನಕರ್ತೃಗಳೆಂದೆನಿಸುವ ಜೀವರಿಗೆ ಪುಣ್ಯಪಾಪ ಸಂಬಂಧ ಉಂಟೇ ಉಂಟು. ಅಂದ ಮೇಲೆ ವಿಧಿ ನಿಷೇಧ ವಾಕ್ಯಗಳಿಗೆ ಅಂದರೆ ವಿಧಿ ನಿಷೇಧ ಶಾಸ್ತ್ರಕ್ಕೆ ಬಂತೆಂದು ತಿಳಿಯಬೇಕು,.

ಸ್ವತಃ ಅಸ್ವತಂತ್ರನು ಅಂದರೆ ಕ್ರಿಯಾ ಸ್ವಾತಂತ್ರ್ಯಯಿಲ್ಲದವನು ಎಂದು ಹೇಳಿದ ಮೇಲೆ ಯಾವ ವಿಧವಾದ ಕರ್ಮಗಳನ್ನು ಮಾಡುವುದಕ್ಕೂ ಜೀವರಿಗೆ ಸ್ವಾತಂತ್ರ್ಯವೇ ಇಲ್ಲ, ದೇವರೇ ಮಾಡಿಸುತ್ತಾನೆಂದು ಹೇಳಿದಂತಾಯಿತು. ಯಾರು ಕರ್ಮಗಳನ್ನು ಮಾಡಿಸುವರೋ ಅದರ ಫಲವು ಅವರಿಗೆ ಸಂಬಂಧಿಸುತ್ತದೆ ಹೊರತು ಜೀವನಿಗೆ ಏನು ಸಂಬಂಧವೆಂಬ ಆಕ್ಷೇಪ ಬರುತ್ತದೆ. ಅಲ್ಲದೇ ಕರ್ಮಗಳನ್ನು ಮಾಡಿಸುವ ದೇವರಾದರೂ ನಿರ್ನಿಮಿತ್ತವಾಗಿ ಒಬ್ಬರಿಗೆ ಸುಖವನ್ನು ಇನ್ನೊಬ್ಬರಿಗೆ ದುಃಖವನ್ನು ಕೊಡುವುದರಿಂದ

ದೇವರಿಗೆ ವೈಷಮ್ಯಾದಿ ದೋಷ ಬರುತ್ತದೆ. ಭಗವಂತನು ತಾನಾಗಿಯೇ ಅಂದರೆ ನಿರ್ನಿಮಿತ್ತವಾಗಿಯೇ ಜೀವರಿಂದ ಸ್ವೇಚ್ಛೆಯಾಗಿ ಕರ್ಮಗಳನ್ನು ಮಾಡಿಸಿ ಸುಖ ದುಃಖಗಳನ್ನು ಕೊಡುವುದಿಲ್ಲ. ಆದರೆ "ಪುಣ್ಯೇನ ಪುಣ್ಯಂ ಲೋಕಂ ಪಾಪೇನ ಪಾಪಂ" (ಬ್ರ ಸ್ತ್ರೂ ಭಾ 2- 1-36) ಈ ಪ್ರಮಾಣವಚನದಂತೆ ಜೀವರ ಕರ್ಮಾನುಸಾರವಾಗಿ ಫಲಕೊಡುವುದರಿಂದ ದೇವರಿಗೆ ವೈಷಮ್ಯಾದಿ ದೋಷ ಬರುವುದಿಲ್ಲ ಎಂದು ಹೇಳುವದು ಸರಿಯಲ್ಲ. ಏಕೆಂದರೆ ಲೋಕದಲ್ಲಿ ಒಬ್ಬನು ಸ್ವಲ್ಪವೂ ದುಷ್ಟಕಾರ್ಯಗಳನ್ನೇ ಮಾಡುವುದಿಲ್ಲವಾದರೂ ಅವನಿಗೆ ಘೋರವಾದ ಕಷ್ಟಗಳು ಬಂದೊದಗುತ್ತವೆ. ಇನ್ನೊಬ್ಬನು ಅಖಂಡೈಶ್ವರ್ಯ ಪ್ರಾಪಕವಾದ ಕರ್ಮಗಳನ್ನು ಮಾಡಿರುವುದಿಲ್ಲವಾದರೂ ಅವನಿಗೆ ಅಪರಿಮಿತ ಐಶ್ವರ್ಯವು ಬರುವುದು ಲೋಕದಲ್ಲಿ ಕಂಡಿದೆ. ದೇವರು ಈ ರೀತಿ ಮಾಡುವವನಾದ್ದರಿಂದ ಅವನಿಗೆ ವೈಷಮ್ಯಾದಿ ದೋಷ ಬಂದೇ ಬರುತ್ತದೆಂದರೆ ಶಾಸ್ತ್ರಕಾರರು ಹೇಳುತ್ತಾರೆ.

ಜೀವರು ಅನಾದಿ ಕರ್ಮಬದ್ಧರೆಂದು ಹೇಳಿರುವುದರಿಂದ ಈಗ ಮಾಡಿದ ಕರ್ಮಗಳನ್ನು ಮಾತ್ರವಲ್ಲದೇ ಜನ್ಮಾಂತರದಲ್ಲಿ ಮಾಡಿದ ಕರ್ಮಗಳನ್ನು ನಿಮಿತ್ತ ಮಾಡಿಕೊಂಡು ಭಗವಂತನು ಸುಖ ದುಃಖಗಳನ್ನು ಕೊಡುತ್ತಾನೆ.

**ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್ ಪೂರ್ವಕರ್ಮಣಾ ।**
**ಅನಾದಿತ್ವಾತ್ ಕರ್ಮಣಶ್ಚ ನ ವಿರೋಧಃ ಕಥಂಚನ ॥**

ಬ್ರ. ಸೂ. ಭಾ .(2-1-10)

ಈ ಭವಿಷ್ಯತ್‌ಪರ್ವ ವಚನವು ಇದನ್ನು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಭಗವಂತನಿಗೆ ವೈಷಮ್ಯಾದಿ ದೋಷ ಬರುವುದಿಲ್ಲ.

ಈ ನಿರೂಪಣೆಯಿಂದ ಭಗವಂತನಿಗೆ ವೈಷಮ್ಯಾದಿ ದೋಷನಿವಾರಣೆ ಮಾಡಿದಂತೆ ಆಯಿತು. ಆದರೆ ಹಿಂದಿನ ಕರ್ಮ ಮಾಡಿಸಿದವನು ದೇವರೇ ಅಲ್ಲವೇ? ಜೀವರಿಗೆ ಕರ್ಮ ಮಾಡುವ ಸ್ವಾತಂತ್ರ್ಯವೆಲ್ಲಿದೆ? ಅದಿಲ್ಲವಾದ್ದರಿಂದ ತತ್ಕೃತ ಜನ್ಯ- ಶುಭಾ ಶುಭ ಫಲಗಳು ಜೀವರಿಗೆ ಏನು ಸಂಬಂಧ? ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಅದರ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದಿಂದ ಹುಟ್ಟಿತು. ಹೀಗಾಗಿ ಪೂರ್ವ ಪೂರ್ವತನ ಕೃತ ಕರ್ಮವನ್ನು ನಿಮಿತ್ತ ಮಾಡಿಕೊಂಡು ಜೀವರಿಗೆ ಶುಭಾಶುಭ ಫಲಗಳನ್ನು ಕೊಡುತ್ತಾನೆ, ಎಂದರೆ ಕರ್ಮಪರಂಪರೆಯು ಅನಾದಿತಃ ಪ್ರವಾಹರೂಪೇಣ ಇದೆಯೆಂದು ಹೇಳಿದಂತಾಯಿತು. ಪ್ರವಾಹರೂಪೇಣ ಇರುವ ಕರ್ಮಪರಂಪರೆಯೂ ಭಗವಂತನ

ಅಧೀನವೇ ಆಗಿದೆ. ಆತನೇ ಜೀವರಿಗೆ ಕರ್ಮ ಫಲವನ್ನು ಕೊಡುವವನಾದ್ದರಿಂದ ಅವನು ಪಕ್ಷಪಾತದಿಂದ ಒಬ್ಬರಿಗೆ ಸುಖ ಇನ್ನೊಬ್ಬರಿಗೆ ದುಃಖ ಕೊಡುತ್ತಾನೆಂಬ ವೈಷಮ್ಯವು ತಪ್ಪುವದಿಲ್ಲ, ಎಂಬ ಆಕ್ಷೇಪ ಮತ್ತೆ ಬರುತ್ತದೆ.

ಜೀವರಿಗೆ ಸುಖ ದುಃಖ ಪ್ರಾಪಕವಾದ ಕರ್ಮವೆಂಬುದು ಅವರವರ ಅನಾದಿ ನಿತ್ಯಯೋಗ್ಯತೆಯನ್ನು ಅನುಸರಿಸಿ ಇರುತ್ತದೆ. ಆ ಯೋಗ್ಯತಾನುಸಾರವಾಗಿ ಜೀವರಿಂದ ಕರ್ಮಗಳನ್ನು ಮಾಡಿಸಿ ಫಲವನ್ನು ಕೊಡುವನೆಂದೂ ಹೇಳಿದರೆ ಆ ಯೋಗ್ಯತೆಯನ್ನು ಜೀವರಿಗೆ ಕೊಟ್ಟವನು ಸರ್ವ ಸ್ವತಂತ್ರನಾದ ಭಗವಂತನೇ ಆದ್ದರಿಂದ ಜೀವರಿಗೆ ಏನು ಸಂಬಂಧವಿದೆ ? ಎಂಬ ಪ್ರಶ್ನೆ ಬರುತ್ತದೆ. ಇದು ಸರಿಯಲ್ಲ ಜೀವರ ಯೋಗ್ಯತೆಯೆಂಬುದು ಅವರ ಸ್ವರೂಪಭೂತವಾದುದು ಮತ್ತು ಅನಾದಿಸಿದ್ಧವಾದ ಅಂತಹ ಸ್ವರೂಪಕ್ಕೆ ಅನುಗುಣವಾಗಿರುವ ಕರ್ಮಗಳನ್ನು ಜೀವರಿಂದ ಮಾಡಿಸಿ ಅದಕ್ಕೆ ಯೋಗ್ಯವಾದ ಸುಖ ದುಃಖಾದಿಗಳನ್ನು ಅವರಿಗೆ ಕೊಡುತ್ತಾನೆಂದು ತಿಳಿಯಬೇಕು.

ಭಗವಂತ ಸರ್ವಸ್ವತಂತ್ರನೇ ಆದ್ದರಿಂದ ಈ ಜೀವರ ಯೋಗ್ಯತೆಯನ್ನು ಬದಲಾಯಿಸಿ ಎಲ್ಲರಿಗೂ ಸುಖವನ್ನೇ ಏಕೆ ಕೊಡಬಾರದು ಎಂದರೆ ಭಗವಂತನು ಸಮನು, ಸತ್ಯಸಂಕಲ್ಪನು. ಆದ್ದರಿಂದ ಅದನ್ನು ಬದಲಾಯಿಸುವದಿಲ್ಲ. ಹೀಗೆ ಹೇಳಿದರೆ ಜೀವರ ಸ್ವರೂಪವನ್ನು ತಿದ್ದಿ ಬದಲಾಯಿಸುವುದಕ್ಕೆ ಅವನಿಗೆ ಶಕ್ತಿ ಇಲ್ಲವೆಂದು ಅರ್ಥವಾಗುತ್ತದೆ. ಶಕ್ತಿ ಇಲ್ಲವೆಂದು ಹೇಳಿದರೆ ಅವನ ಸ್ವಾತಂತ್ರ್ಯವೇನು ಉಳಿಯಿತು ಎಂಬ ಪ್ರಶ್ನೆ ಬರುತ್ತದೆ ಅಂದರೆ

1. ವೈಷಮ್ಯವನ್ನು ಪರಿಹಾರ ಮಾಡಿದರೆ ದೇವರ ಸ್ವಾತಂತ್ರ್ಯಕ್ಕೆ ಭಂಗ ಬರುತ್ತದೆ. ಅವನು ಪರತಂತ್ರನೆಂದು ಹೇಳಬೇಕಾಗುತ್ತದೆ.

2. ಪರತಂತ್ರವನ್ನು ನಿವಾರಣೆ ಮಾಡಿದರೆ ವೈಷಮ್ಯವು ಅನಿವಾರಣೀಯ ವಾಗುತ್ತದೆ. ಎಂದಾಗ ಹೇಳುತ್ತಾರೆ.- ''ಅನಾದಿಯೂ, ನಿತ್ಯವೂ ಆಗಿರುವ ಜೀವರ ಸ್ವರೂಪವನ್ನು ನಾನು ಬದಲಾಯಿಸುವುದಿಲ್ಲ. ಸ್ವರೂಪ ಯೋಗ್ಯತೆಯನ್ನನುಸರಿಸಿಯೇ ಜೀವರಿಗೆ ಸುಖ ದುಃಖಾದಿಗಳನ್ನು ಕೊಡುತ್ತೇನೆ.'' ಎಂಬ ಸತ್ಯಸಂಕಲ್ಪವುಳ್ಳ ದೇವರಿಗೆ ಯಾವ ದೋಷವೂ ಇಲ್ಲ. ಜೀವರ ಯೋಗ್ಯತಾ, ತಾರತಮ್ಯವು ವೇದಾದಿ ಪ್ರಮಾಣ ಪ್ರಮಿತವಾಗಿದೆ. ಈ ತಾರತಮ್ಯವನ್ನು ದೇವರು ಎಂದಿಗೂ ಭಂಗಮಾಡುವುದಿಲ್ಲ. ಅಂದರೆ ವೇದಾದಿ ಶಾಸ್ತ್ರಸಿದ್ಧವಾದ ಜೀವತಾರತಮ್ಯವನ್ನು ಕೆಡಿಸುವುದಿಲ್ಲವೆಂದೂ, ಯೋಗ್ಯತಾನುಗುಣವಾಗಿ ಕರ್ಮಫಲವನ್ನು ಕೊಡುತ್ತಾನೆಂದೂ, ಈ ಕರ್ಮವು

ಪರಂಪರಯಾ ಪ್ರಾಪ್ತವಾದುದೆಂದು ಹೇಳಿದರೂ, ಒಬ್ಬರಿಗೆ ಸುಖ, ಇನ್ನೊಬ್ಬರಿಗೆ ದುಃಖವಾಗುವುದು ತಪ್ಪುವದಿಲ್ಲವಾದ್ದರಿಂದ ದೇವರಿಗೆ ವೈಷಮ್ಯಾದಿ ದೋಷ ತಪ್ಪಲಿಲ್ಲವೆಂದರೆ, ಇಂತಹ ವೈಷಮ್ಯವು ಸಹ್ಯವೇ, ಸರಿಯಾದುದೇ ಎಂಬುದಾಗಿ ಸೂತ್ರಕಾರರು ಹೇಳಿರುತ್ತಾರೆ.

**॥ ಓಂ ಉಪಪದ್ಯತೇ ಚಾಪ್ಯುಪಲಭ್ಯತೇ ಚ ಓಂ ॥ 2 - 1 -37**

ಭಗವಂತನಾದರೂ "ಜೀವರ ಕರ್ಮಾಪೇಕ್ಷಯಾ ಸುಖ ದುಃಖಗಳನ್ನು ಕೊಡುತ್ತೇನೆ. ನಾನು ಈ ಸಂಕಲ್ಪವನ್ನು ಬದಲಾಯಿಸುವದಿಲ್ಲ" ವೆಂದು ಏಕೆ ಸಂಕಲ್ಪ ಮಾಡುತ್ತಾನೆ? ಎಂದರೆ ಆತನು ಈಶ್ವರನಾದುದರಿಂದ ಆತನ ಸ್ವಾತಂತ್ರ್ಯವನ್ನು ಆಕ್ಷೇಪಿಸುವದು ನಮ್ಮ ಕಾರ್ಯವಲ್ಲ. ಅದು ಅವನ ಸ್ವಭಾವವೂ ಲೀಲೆಯೂ ಆಗಿದೆ.

**ಸ ಕಾರಯೇತ್ಪುಣ್ಯಮಥಾಪಿ ಪಾಪಂ**
**ನ ತಾವತಾ ದೋಷವಾನೀಶಿತಾಪಿ ।**
**ಈಶೋ ಯತೋ ಗುಣದೋಷಾದಿ ಸತ್ವೇ**
**ಸ್ವಯಂ ಪರೋಽನಾದಿರಾದಿಃ ಪ್ರಜಾನಾಂ ॥** (ಚತುರ್ವೇದ ಶಿಖಾವಚನ)

ಜೀವರಿಗೆ ಅವರ ಯೋಗ್ಯತಾ ಪ್ರಕಾರವಾಗಿ, ಅನಾದಿ ಕರ್ಮಾನುಸಾರವಾಗಿಯೇ ಕರ್ಮಗಳನ್ನು ಮಾಡಿಸುತ್ತಾನೆಂದು ಹೇಳಿದರೆ, ಹೀಗೆ ಕರ್ಮ ಮಾಡಿಸುವುದಕ್ಕೆ ಭಗವಂತನೊಬ್ಬನೇ ಶಕ್ತನಲ್ಲವೆಂದೂ, ಅವನು ಮತ್ತು ಅನಾದಿ ಕರ್ಮ ಇಬ್ಬರೂ ಸೇರಿ ಶುಭಾಶುಭಫಲಕವಾದ ಕ್ರಿಯೆಗಳನ್ನು ಜೀವರಿಂದ ಮಾಡಿಸುತ್ತಾರೆಂದು ಹೇಳಿದಂತೆ ಆಯಿತು. ಹೀಗೆ ಹೇಳಿದರೆ ಭಗವಂತನು ಸರ್ವಸ್ವತಂತ್ರನು ಎಂಬುದು ಸಮರ್ಥನೆ ಮಾಡಿದಂತೆ ಆಗಲಿಲ್ಲ, ಪ್ರತ್ಯುತ ಕರ್ಮದ ಸಹಾಯ ಪಡೆದೇ ಕಾರ್ಯ ಮಾಡುವನೆಂದು ಹೇಳುವುದರಿಂದ ಅಸ್ವಾತಂತ್ರ್ಯವನ್ನೇ ದೇವರಿಗೆ ಹೇಳಿದಂತೆ ಆಗುತ್ತದೆ. ಎಂದರೆ ಇದು ತಪ್ಪು ಕಲ್ಪನೆ ಎಂದು ತಿಳಿಯಬೇಕು. ಏಕೆಂದರೆ ಕರ್ಮವು ಜಡಭೂತವಾದುದು. ಅದು ಸ್ವತಂತ್ರವಾದ ಭಗವಂತನ ಅಧೀನವಾಗಿಯೇ ಯಾವಾಗಲೂ ಇರುತ್ತದೆ. ತನ್ನ ಅಧೀನವಾಗಿರುವ ಕರ್ಮಾನುಸಾರವಾಗಿ ಮತ್ತು ಜೀವರ ಕರ್ಮ, ಪ್ರಯತ್ನ, ಯೋಗ್ಯತೆಗಳನ್ನು ಅನುಸರಿಸಿ ಫಲಕೊಡುತ್ತಾನೆ. ಎಂಬುದು ಶ್ರುತಿ ಪ್ರಮಾಣಸಿದ್ಧವಾದ ವಿಷಯವಾಗಿದೆ.

ಕರ್ಮಾಪೇಕ್ಷೆಯಿಲ್ಲದೇ ಫಲಕೊಡುವ ಶಕ್ತಿಯು ದೇವರಿಗೆ ಇದೆಯೋ ಇಲ್ಲವೋ ಎಂದರೆ ಕರ್ಮಾಪೇಕ್ಷೆ ಇಲ್ಲದೇ ಸ್ವತಂತ್ರವಾಗಿ ಫಲಕೊಡುವ ಶಕ್ತಿ ದೇವರಿಗೆ ಇದೆ. ಆದರೂ ಅವನು ಸ್ವಾಧೀನ ಕರ್ಮಾಪೇಕ್ಷಯಾ ಫಲಕೊಡುವುದಾಗಿ ಸಂಕಲ್ಪಿಸಿದ್ದಾನೆ. ಈ ಅನಾದಿಯಾದ ಕರ್ಮವೂ ಸಹ ದೇವರ ಅಧೀನವಾಗಿಯೇ ಇದೆ.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥**

ಬ್ರ. ಸೂ ಭಾ 2-1- 37

ಅನಾದಿಯಾದ ಪದಾರ್ಥಗಳು ಕೂಡ ತನ್ನ ಅಧೀನವೆಂದು ತನ್ನ ಐಶ್ವರ್ಯ ದ್ಯೋತನಾರ್ಥವಾಗಿಯೇ ದೇವರು ಕರ್ಮಾಪೇಕ್ಷಯಾ ಫಲಕೊಡುವನೇ ಆಗಲಿ ಅದನ್ನು ಬಿಟ್ಟರೆ ದೇವರು ಕರ್ಮಮಾಡಿಸಲಾರನೆಂದಲ್ಲ. ಅವನು ಸರ್ವ ಜಗತ್ ಪ್ರಭುವಾಗಿದ್ದಾನೆ.

ಜೀವರೆಲ್ಲರೂ ಪರಾಧೀನಕರ್ತೃತ್ವ ವಿಶಿಷ್ಟರು ಎಂದು ಸಿದ್ಧವಾಗುವದರಿಂದ ಇಂತಹ ಕರ್ಮಗಳನ್ನು ಮಾಡಿರಿ, ಇಂತಹ ಕರ್ಮಗಳನ್ನು ಮಾಡಬೇಡಿರಿ ಎಂದು ಬೋಧಿಸುವ ನಿಷೇಧವಾಕ್ಯಗಳು ಸಾರ್ಥಕವಾಗುವವು. ಶಾಸ್ತ್ರದಲ್ಲಿ ಕೆಲವು ಕಡೆ ಜೀವರಿಗೆ ಕರ್ತೃತ್ವ ಇಲ್ಲವೆಂದು ಹೇಳಿದೆ. ಕೆಲವು ಕಡೆ ಕರ್ತೃತ್ವ ಇದೆ ಎಂದು ಹೇಳಿದೆ ಇದು ಹೇಗೆ? ಎಂದರೆ ಜೀವರಿಗೆ ಕರ್ತೃತ್ವ ಇದೆ ಎಂದು ಹೇಳಿದ್ದರೆ ಅದಕ್ಕೆ ಪರಾಧೀನವಾದ ಕರ್ತೃತ್ವವಿದೆಯೆಂದು ಅರ್ಥವು. ಜೀವರಿಗೆ ಕರ್ತೃತ್ವ ಇಲ್ಲವೆಂದು ಹೇಳಿದ್ದರೆ ಸ್ವತಂತ್ರ ಕರ್ತೃತ್ವ ಇಲ್ಲವೆಂದೇ ಅರ್ಥವು. ಜೀವರಿಗೆ ಕರ್ತೃತ್ವ ಇದೆ ಸ್ವಾತಂತ್ರ್ಯವಿಲ್ಲ. ಜೀವರ ಈ ಕರ್ತೃತ್ವ ಶಕ್ತಿಯು ಈಶ್ವರಾಧೀನವೆಂದು ಅರ್ಥವು.

ಶ್ರೀಮಧ್ವಾಚಾರ್ಯರು ಜೀವನಿಗೆ ಕರ್ತೃತ್ವ ಇದೆಯೆಂದು ಸಾಧಿಸಲು ''ಯತ್ ಕರ್ಮ ಕುರುತೇ ತದಭಿಸಂಪದ್ಯತೇ'' ಎಂಬ ಬೃಹದಾರಣ್ಯಕ ಶ್ರುತಿಯನ್ನು ಆಧಾರವನ್ನಾಗಿ ಕೊಟ್ಟಿದ್ದಾರೆ. ಶ್ರೀವೇದವ್ಯಾಸರು **''ಕರ್ತಾ ಶಾಸ್ತ್ರಾರ್ಥವತ್ವಾತ್''** (2-3-33) ಎಂಬ ಸೂತ್ರದಲ್ಲಿ ಜೀವನಿಗೂ ಕರ್ತೃತ್ವವು ಇದೆಯೆಂದು ಸಾಧಿಸಿದ್ದಾರೆ. ಶ್ರೀಮಧ್ವಾಚಾರ್ಯರು ಶ್ರೀಮನ್ ಮ. ಭಾ. ತಾ. ನಿರ್ಣಯದಲ್ಲಿ ಹೇಳುತ್ತಾರೆ.

**ಪ್ರತ್ಯಕ್ಷೈಷಾ ಕರ್ತೃತಾ ಜೀವಸಂಸ್ಥಾ**
**ತಥಾಗಮಾತ್ ಅನುಮಾನಾಚ್ಚ ಸರ್ವಮ್ ॥** (22ನೆ ಅಧ್ಯಾಯ)

ಜೀವನಲ್ಲಿ ಅಂದರೆ ನಮ್ಮೆಲ್ಲರಲ್ಲಿಯೂ ಜ್ಞಾನ, ಇಚ್ಛಾ ಕ್ರಿಯೆಗಳು ಇವೆಯೆಂಬುದು ನಮ್ಮ ಅನುಭವಗೋಚರವಾದ ವಿಷಯವಾಗಿದೆ. ಇದಕ್ಕೆ ಅನುಮಾನ ಮತ್ತು ಆಗಮಗಳು ಆಧಾರವಾಗಿವೆ. ಸುಖದುಃಖಗಳನ್ನು ನಾವು ಅನುಭವಿಸುತ್ತಿರು-ವುದರಿಂದ ಅದಕ್ಕೆ ಕಾರಣವಾದ ಶುಭಾ ಶುಭಕರ್ಮಗಳನ್ನು ನಾವೇ ಮಾಡಿದ್ದೇವೆ ಎಂದು ಊಹಿಸಬಹುದು. ಇದು ಜೀವನಲ್ಲಿ ಕರ್ತೃತ್ವ ಶಕ್ತಿ ಇದೆಯೆನ್ನಲು ಅನುಮಾನ ಪ್ರಮಾಣವು. "ಕುರ್ವನ್ನೇವೇಹ ಕರ್ಮಾಣಿ" ಎಂಬ ಈ ಶಾವಾಸ್ಯೋಪನಿಷತ್ತು ಜೀವನಿಗೆ ಕರ್ಮವನ್ನು ವಿಧಿಸುವ ಮೂಲಕ ಅವನ ಕರ್ತೃತ್ವವನ್ನು ತಿಳಿಸುತ್ತದೆ. ಹೀಗೆ ಜೀವಕರ್ತೃತ್ವವು ಪ್ರತ್ಯಕ್ಷ, ಅನುಮಾನ ಆಗಮಗಳಿಂದ ಸಿದ್ಧವಾಗುತ್ತದೆ.

**ಅಸ್ತ್ಯೇವ ಜೀವಸ್ಯ ಕರ್ತೃತ್ವಂ ।**
**ತದಭಾವೇ ವಿಧಿನಿಷೇಧ ಶಾಸ್ತ್ರ ವೈಯರ್ಥ್ಯಪ್ರಸಂಗಾತ್ ॥**

ಎಂಬುದಾಗಿ ಶ್ರೀಟೀಕಾಚಾರ್ಯರು ತತ್ವಪ್ರಕಾಶಿಕಾ ಗ್ರಂಥದಲ್ಲಿ ಜೀವನಿಗೆ ಕರ್ತೃತ್ವವನ್ನು ಸಮರ್ಥಿಸಿದ್ದಾರೆ.

"ನಾನ್ಯೋಽತೋಽಸ್ತಿ ಕರ್ತಾ" ಎಂಬ ಶ್ರುತಿಯಲ್ಲಿ ಈಶನನ್ನು ಬಿಟ್ಟು ಬೇರಾರೂ ಕರ್ತೃಗಳೇ ಇಲ್ಲವೆಂದು ಹೇಳಲಾಗಿದೆ. ಆದರೆ ಇದಕ್ಕೆ "ಸ್ವತಂತ್ರನಾದ ಕರ್ತೃ ಇನ್ನೊಬ್ಬನಿಲ್ಲ" ಎಂದಿಷ್ಟೇ ಅರ್ಥವು.

**ಸ್ವಾತಂತ್ರ್ಯಾದೇಃ ನಾನ್ಯೋಽತೋಽಸ್ತಿಕರ್ತಾ ಇತಿ ಶ್ರುತಿಬಾಧಿತತ್ವಾತ್ ॥**

ಎಂಬುದಾಗಿ ಸುಧಾದಲ್ಲಿ ಇದೇ ಅಭಿಪ್ರಾಯವನ್ನು ಹೇಳಲಾಗಿದೆ.

**ಜೀವಸ್ಯ ಸ್ವತಃ ಕರ್ತೃತ್ವಾದಿಮತ್ವೇಽಪಿ ತಸ್ಯ ಸ್ವಾತಂತ್ರ್ಯ ಬುದ್ಧಿಃ ಭ್ರಮಃ ॥**
ಎಂಬುದಾಗಿ ಪರಿಮಳ ಗ್ರಂಥದಲ್ಲಿ ಶ್ರೀರಾಯರು ಜೀವನಿಗೆ ಕರ್ತೃತ್ವ ಇದೆ. ಆದರೆ ತಾನು ಸ್ವತಂತ್ರ ಕರ್ತಾ ಎನ್ನುವ ಜ್ಞಾನವು ಭ್ರಮೆ ಎಂದಿದ್ದಾರೆ.

ಜೀವನಿಗೆ ಕರ್ತೃತ್ವ ಇದ್ದರೂ ಅದು ಈಶಾಧೀನ. ಅವನು ಪರಾಧೀನಕರ್ತೃ. ಸ್ವತಂತ್ರ ಕರ್ತನಲ್ಲ ಹಾಗಾದರೆ "ದತ್ತ ಸ್ವಾತಂತ್ರ್ಯ" ಪದಕ್ಕೆ ಅರ್ಥವೇನು? ಪ್ರಶ್ನೆ ಸಹಜ.

ಕರ್ತೃತ್ವ ಎಂದರೆ ಜ್ಞಾನ, ಇಚ್ಛಾ ಕ್ರಿಯಾಶಕ್ತಿಗಳು. ಇವು ಒಬ್ಬೊಬ್ಬ ಜೀವರಲ್ಲಿ ಒಂದೊಂದು ವಿಧವಾಗಿವೆ. ಕೆಲವರಿಗೆ ಅಲ್ಪ ಜ್ಞಾನ, ಕೆಲವರಿಗೆ ಹೆಚ್ಚು ಜ್ಞಾನ ಇನ್ನು ಕೆಲವರಿಗೆ ಅತಿ ಹೆಚ್ಚು ಜ್ಞಾನ. ಹೀಗೆ ಜ್ಞಾನ, ಇಚ್ಛಾದಿಗಳು ಜೀವಾತ್ಮರ ಯೋಗ್ಯತೆಯಂತೆ

ಭಿನ್ನ ಭಿನ್ನವಾಗಿವೆ. ಅವು ಜೀವ ಸ್ವರೂಪದಲ್ಲೇ ಇದ್ದರೂ ಅವು ಅಭಿವ್ಯಕ್ತಿಗೊಳ್ಳಬೇಕಾದರೆ ಅದೇ ರೀತಿಯ ಗುಣಗಳುಳ್ಳ ಭಗವಂತನು ಬಿಂಬ ರೂಪದಲ್ಲಿರಬೇಕು. ಭಗವಂತನು ಅನಂತ ಗುಣಪರಿಪೂರ್ಣನಾದರೂ ಜೀವಾತ್ಮರ ಯೋಗ್ಯತೆಗೆ ಅನುಗುಣವಾಗಿ ಅವರಲ್ಲಿ ಎಷ್ಟು ಅಲ್ಪಜ್ಞಾನಾದಿ ಗುಣಗಳಿವೆಯೋ ಅಷ್ಟೇ ಅಲ್ಪಗುಣಗಳನ್ನು ತನ್ನಲ್ಲಿ ವ್ಯಕ್ತಗೊಳಿಸಿ ಕೊಂಡು ಬಿಂಬರೂಪನಾಗಿರುತ್ತಾನೆ. ಲಕ್ಷ್ಮೀದೇವಿಯಲ್ಲಿ ಅತಿ ಹೆಚ್ಚು ಗುಣಗಳುಳ್ಳ ಬಿಂಬ ರೂಪನಾಗಿಯೂ, ಬ್ರಹ್ಮಾದಿದೇವತೆಗಳಲ್ಲಿ ಕ್ರಮೇಣ ಕಡಿಮೆ ಗುಣಗಳುಳ್ಳ ಬಿಂಬರೂಪನಾಗಿ ಇರುತ್ತಾನೆ. ಆದರಿಂದಾಗಿ ಜೀವಾತ್ಮರಲ್ಲಿ ಅವರವರ ಯೋಗ್ಯತೆಗೆ ಅನುಗುಣವಾಗಿ ಕರ್ತೃತ್ವ ಶಕ್ತಿಯು ವ್ಯಕ್ತವಾಗುತ್ತದೆ. ಇದೇ ದತ್ತ ಸ್ವಾತಂತ್ರ್ಯವು. ಆಯಾ ಜೀವರಲ್ಲಿರುವ ಕರ್ತೃತ್ವ ಶಕ್ತಿ ಭಗವಂತನ ಬಿಂಬರೂಪದಿಂದಾಗಿ ಇದೆಯೆಂಬುದೇ ''ದತ್ತ ಸ್ವಾತಂತ್ರ್ಯ'' ಶಬ್ದಕ್ಕೆ ಅರ್ಥವೆಂದು ತಿಳಿಯಬೇಕು.

ಶ್ರೀಮದಾಚಾರ್ಯರು ಚತುರ್ಥಸ್ಕಂಧ ಭಾಗವತತಾತ್ಪರ್ಯ (4- 12-4) ದಲ್ಲಿ ಹೇಳಿರುವ ಮಾತು ಗಮನಾರ್ಹವಾಗಿದೆ.-

**ಪರಮೇಶ್ವರಂ ವಿನಾಽಹಂ ತ್ವಂ ಕರ್ತೇತಿ ಭ್ರಾಂತಿಃ ।**
**ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ ॥**

ಇತಿ ಮೋಕ್ಷಧರ್ಮೇ

ಪರಮಾತ್ಮನ ಪ್ರೇರಣೆ ಇಲ್ಲದೆಯೇ ಸ್ವತಂತ್ರವಾಗಿ ನಾನು ಕರ್ತ, ನೀನು ಕರ್ತ, ಎಂದು ತಿಳಿಯುವದು ಭ್ರಾಂತಿಯು ಏಕೆಂದರೆ ಜೀವರಲ್ಲಿ ಅಸ್ವತಂತ್ರ ಕರ್ತೃತ್ವ, ಪರಮಾತ್ಮನಲ್ಲಿ ಸ್ವತಂತ್ರ ಕರ್ತೃತ್ವವೆನ್ನುವದು ಮೋಕ್ಷಧರ್ಮದಲ್ಲಿ ಉಕ್ತವಾಗಿದೆ. ಸ್ವತಂತ್ರವಾಗಿ ನಾನೂ ಕರ್ತನಲ್ಲ, ನೀನೂ ಕರ್ತನಲ್ಲ, ಸದಾ ಸ್ವತಂತ್ರ ಕರ್ತನೆನಿಸುವವನು ಪರಮಾತ್ಮ ಮಾತ್ರ ಎಂದು ತಿಳಿಯಬೇಕು.

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಮಾತು ಇಲ್ಲಿ ಸ್ಮರಣೀಯ.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ॥**
**ನ ಕರ್ಮಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥** (5- 14)

ಜೀವನು ಸ್ವತಂತ್ರವಾಗಿ ಯಾರಿಂದಲೂ ಕರ್ಮಗಳನ್ನು ಮಾಡಿಸುವದಿಲ್ಲ ಸ್ವತಂತ್ರವಾಗಿ ತಾನೂ ಕರ್ಮಗಳನ್ನು ಮಾಡುವುದಿಲ್ಲ. ಜನರಿಗೆ ಕರ್ಮದ ಫಲವನ್ನು ತಂದುಕೊಡುವ ವಿಷಯದಲ್ಲಿ ಅಥವಾ ತಾನು ಕರ್ಮಫಲವನ್ನು ಪಡೆಯುವ

ವಿಷಯದಲ್ಲಿ ಜೀವನಿಗೆ ಸ್ವಾತಂತ್ರ್ಯ ಇಲ್ಲ. ಸ್ವತಂತ್ರನಾದ ಭಗವಂತನೇ ಕರ್ಮಗಳನ್ನು ಜೀವರಿಂದ ಮಾಡಿಸಿ ಫಲ ಕೊಡುತ್ತಾನೆ.

ಈ ಶ್ಲೋಕದ ವ್ಯಾಖ್ಯಾನದಲ್ಲಿ ಶ್ರೀರಾಘವೇಂದ್ರ ತೀರ್ಥರು ಹೀಗೆ ಬರೆಯುತ್ತಾರೆ.

**ಕದಾಽಪಿ ಕುತ್ರಾಽಪಿ ನಾನ್ಯಸ್ಯ ಸ್ವಾತಂತ್ರ್ಯಂ ದದಾತಿ ।**
**ಕಿಂತು ಸರ್ವತ್ರ ಸರ್ವದಾ ಸ್ವಯಮೇವ ಪ್ರವರ್ತತ ಇತಿ ಭಾವಃ ॥**

ಯಾವಾಗಲೂ, ಎಲ್ಲಿಯೂ, ಬೇರೆ ಯಾವ ಜೀವರಿಗೂ ಸ್ವಾತಂತ್ರ್ಯವನ್ನು ಕೊಡುವುದಿಲ್ಲ, ಎಲ್ಲ ಕಡೆಯಲ್ಲಿಯೂ ಯಾವಾಗಲೂ ತಾನೇ ಸ್ವತಂತ್ರ ಪ್ರವೃತ್ತಿವುಳ್ಳವನಾಗಿದ್ದಾನೆ ಎಂದು ತಾತ್ಪರ್ಯವು.

★★★

# ಜೀವನು ಅಸ್ವತಂತ್ರ ಏಕೆ?

"ಸ್ವತಂತ್ರೋ ಭಗವಾನ್ ವಿಷ್ಣುಃ" ಉಕ್ತಿಯಂತೆ ಈ ಪ್ರಪಂಚದಲ್ಲಿ ಭಗವಂತನೊಬ್ಬನೇ ಸ್ವತಂತ್ರನು ಎಂಬುದಾಗಿ ತಿಳಿದು ಬರುತ್ತದೆ.

ಇಲ್ಲಿ ಜೀವನೂ ಕೂಡ ಸ್ವತಂತ್ರನೆಂದು ಏಕೆ ಹೇಳಕೂಡದು ? ಎಂಬ ಪ್ರಶ್ನೆ ಮೂಡುವುದು ಸಹಜ. ಅದಕ್ಕೆ ಉತ್ತರ ಹೀಗಿದೆ.–

**ಅಲ್ಪಶಕ್ತಿಃ ಅಸಾರ್ವಜ್ಞಂ ಪಾರತಂತ್ರ್ಯಂ ಅಪೂರ್ಣತಾ ।**
**ಉಪಜೀವಕತ್ವಂ ಜೀವತ್ವಂ ಈಶತ್ವಂ ತದ್ವಿಪರ್ಯಯಃ ॥**

ಮಹಾವಿಷ್ಣುಪುರಾಣ

ಪ್ರಮಾಣ ವಚನದಂತೆ ಜೀವನು ಅಲ್ಪಶಕ್ತಿಯುಳ್ಳವನು, ಎಲ್ಲವನ್ನೂ ತಿಳಿಯ-ದಿರುವವನು, ಯಾವಾಗಲೂ ಪರತಂತ್ರನು (ಅನ್ಯಾಧೀನನು). ಪೂರ್ಣತ್ವವಿಲ್ಲ-ದವನು, ಯಾವಾಗಲೂ ಇನ್ನೊಬ್ಬರನ್ನು ಆಶ್ರಯಿಸಿಕೊಂಡಿರುವವನಾಗಿದ್ದಾನೆ. ಆದ್ದರಿಂದ ಅವನು ಅಸ್ವತಂತ್ರನೇ. ಭಗವಂತನು ಜೀವನಲ್ಲಿರುವ ಈ ಧರ್ಮಗಳಿಂದ ವಿರುದ್ಧಗಳಾದ ಸರ್ವಶಕ್ತಿ, ಪೂರ್ಣತ್ವ ಈಶತ್ವ ಮೊದಲಾದ ಧರ್ಮಗಳುಳ್ಳವನಾದ್ದರಿಂದ ಅವನು ಸ್ವತಂತ್ರನಾಗಿದ್ದಾನೆ.

ಸ್ವತಂತ್ರನಾದ ವ್ಯಕ್ತಿಯು ಎಲ್ಲವನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿರುವನಾದ್ದರಿಂದ, ಜೀವನು ಸ್ವತಂತ್ರ ಎನ್ನುವುದಾದರೆ ತನಗೆ ನಿತ್ಯ ಸುಖವೇ ಆಗುವಂತೆ ಏಕೆ ಮಾಡಿಕೊಳ್ಳಬಾರದು?

ಇದನ್ನೇ ಶ್ರೀಮದಾನಂದತೀರ್ಥಭಗವತ್ಪಾದರು–

**ಯದಿನಾಮ ನ ತಸ್ಯ ವಶೇ ಸಕಲಂ ಕಥಮೇವತು ನಿತ್ಯಸುಖಂ ನ ಭವೇತ್ ॥**

ದ್ವಾದಶಸ್ತೋತ್ರ

ಎಂಬುದಾಗಿ ಹೇಳುತ್ತ ಎಲ್ಲವೂ ಜೀವನ ಅಧೀನವೆಂದಾಗಿದ್ದರೆ ಅವನಿಗೆ ನಿತ್ಯ ಸುಖವೇಕೆ ಸಿಗುತ್ತಿಲ್ಲ? ಅವನು ದುಃಖಿಯಾಗುವುದೇಕೆ? ಎಂದಿದ್ದಾರೆ.

ಇದನ್ನೇ ಸೂತ್ರಕಾರರು–

**ಓಂ ಇತರ ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ಓಂ ॥** (2-1- 22) ಹಾಗೂ **ಓಂ ಅಶ್ಮಾದಿವಚ್ಚ ತದನುಪಪತ್ತಿಃ ಓಂ ॥** (2-1-24)

ಇತ್ಯಾದಿ ಸೂತ್ರಗಳಲ್ಲಿ ಜೀವನು ತನಗೆ ಹಿತವಾಗುವಂತೆ, ಅಹಿತವಾಗದಂತೆ ಮಾಡಿಕೊಳ್ಳಲಾರ. ಮರಣ, ನಿದ್ರಾದಿಗಳಲ್ಲಿ ಇದು ಅನುಭವ ವೇದ್ಯವಾಗಿದೆ ಎಂಬದಾಗಿ ತಿಳಿಸಿಕೊಟ್ಟಿದ್ದಾರೆ. ಆ ಪ್ರಯುಕ್ತ ಜೀವನು ಸ್ವತಂತ್ರನಲ್ಲ, ಅಸ್ವತಂತ್ರನೇ ಎಂದು ಸಿದ್ಧವಾಗುತ್ತದೆ.

ಜೀವರು ಶ್ರೀಹರಿಯ ಅಧೀನರಾಗಿ ಪರಾಪೇಕ್ಷಾಯುತರಾದುದರಿಂದ - ಅಸ್ವತಂತ್ರರೆಂದು ಕರೆಸಿಕೊಳ್ಳುತ್ತಾರೆ. ಬ್ರಹ್ಮಾದಿ ಸಕಲ ಮುಕ್ತ, ಅಮುಕ್ತ ಜೀವರು ಅನಾದಿಯಿಂದ ಅಸ್ವತಂತ್ರರು. ಜೀವರ ಸ್ವರೂಪ ಜ್ಞಾನ ಕರ್ಮೇಂದ್ರಿಯಗಳು ನಿತ್ಯ ಸ್ಫುಟವಾಗಿರುವವಾದರೂ ಈ ಸ್ವರೂಪೇಂದ್ರಿಯಗಳಲ್ಲಿ ಸ್ವರೂಪತಃ ಸ್ವತಂತ್ರನಾದ ಶ್ರೀ ಹರಿಯು ನಿಂತು ಪ್ರೇರಿಸದ ವಿನಾ ಅವು ಕಾರ್ಯ ಮಾಡಲಾರವು. ಈ ಪ್ರಕಾರ ಅನಾದಿಯಿಂದ ಸದಾಕಾಲ ಎಲ್ಲ ಅವಸ್ಥೆಗಳಲ್ಲಿ ಜೀವರು ಶ್ರೀಹರಿಯ ಅಧೀನರು ಅಸ್ವತಂತ್ರರು. ಇವರ ಸ್ವರೂಪೇಂದ್ರಿಯ ಪ್ರೇರಣೆಗೆ ಶ್ರೀಹರಿಯು ಮುಖ್ಯನು. ಶ್ರೀಹರಿಯ ಚಲನೆ ವಿನಾ ಜೀವ ಚಲಿಸಲಾರನೆಂದು ಪ್ರಕಾಶಸಂಹಿತೆಯಲ್ಲಿ ತಿಳಿಸಿದ್ದಾರೆ.

ಜೀವನು ಭಗವಂತನ ಪ್ರತಿಬಿಂಬನು ಎಂಬುದಾಗಿ **ಓಂ ಆಭಾಸ ಏವ ಚ ಓಂ ॥** ಇತ್ಯಾದಿ ಸೂತ್ರಗಳಲ್ಲಿ ತಿಳಿಸಲಾಗಿದೆ. ಪ್ರತಿಬಿಂಬವು ಬಿಂಬಾಧೀನವಾಗಿರುವಂತೆ ಜೀವನು ಭಗವಂತನ ಅಧೀನನೇ ಆದ್ದರಿಂದ ಅಸ್ವತಂತ್ರನೇ ಆಗಿದ್ದಾನೆ. ಈ ಬಿಂಬನಾದ ಭಗವಂತ ನನ್ನು ತಿಳಿಯುವದು, ಕಾಣುವದು ಮೋಕ್ಷಕ್ಕೆ ಕಾರಣವೆಂದು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ.



# ಜೀವನ ಕರ್ಮಮೀಮಾಂಸೆ

ಎಲ್ಲ ಜೀವರೂ ಅನಾದಿಕರ್ಮದಿಂದ ಬದ್ಧರು. ಎಲ್ಲರೂ ಸರ್ವವಿಧದಿಂದ ಶ್ರೀಹರಿಯ ಅಧೀನರು. ಇವರೆಲ್ಲರೂ ಮುಕ್ತರಾಗುವವರೆಗೆ ಸಂಸಾರದಲ್ಲಿ ಸುತ್ತುತ್ತಿರುತ್ತಾರೆ.[1]

ಜೀವರನ್ನು ಬಂಧಿಸಿರುವ ಆ ಕರ್ಮವು ದ್ವಿವಿಧವೆಂದು ಹೇಳಲ್ಪಟ್ಟಿದೆ. ಧರ್ಮವೆಂದೂ, ಅಧರ್ಮವೆಂದೂ, ಕರ್ಮವು ಎರಡು ವಿಧ – ಸುಖ ಮಾತ್ರಕ್ಕೆ ಕಾರಣವಾಗುವದು ಧರ್ಮವೆನಿಸುತ್ತದೆ. ದುಃಖಕ್ಕೆ ಮಾತ್ರ ಕಾರಣವಾಗುವದು ಅಧರ್ಮವು.[2]

ಧರ್ಮವೆಂಬುದು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯವೆಂದು ತ್ರಿವಿಧವಾಗಿದೆ. ದಿನ, ಮಾಸ, ಋತು, ಪಕ್ಷ ಮೊದಲಾದ ಕಾಲಗಳಲ್ಲಿ ತಪ್ಪದೇ ಆಚರಿಸಲ್ಪಡತಕ್ಕದೆಂದೂ, ಆಚರಿಸದಿದ್ದರೆ ದೋಷವೆಂದು ಸಚ್ಛಾಸ್ತ್ರಗಳಲ್ಲಿ ಹೇಳಲ್ಪಡುವ ಧರ್ಮಗಳು ''ನಿತ್ಯ'' ವೆಂದು ಹೇಳಲಾಗುತ್ತವೆ. ಕಾಲನಿಯಮವಿಲ್ಲದಿದ್ದರೂ, ಕಾಲವಿಶೇಷದಲ್ಲಿ (ಗ್ರಹಣಾದಿ ಕಾಲಗಳಂತೆ) ಯಾವ ಧರ್ಮವು ವಿಹಿತವೆಂದು ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವುದೋ ಮತ್ತು ಯಾವುದನ್ನು ಆಚರಿಸದಿದ್ದರೆ ಪ್ರತ್ಯವಾಯವುಂಟೋ ಅದು ''ನೈಮಿತ್ತಿಕ''ವೆಂದು ಹೇಳಲಾಗುತ್ತದೆ. ಗೊತ್ತಾದ ಕಾಲದಲ್ಲಿಯಾಗಲೀ, ಅಥವಾ ಕಾಲನಿಯಮವಿಲ್ಲದೇ ಇಚ್ಛಾನುಸಾರವಾಗಿಯಾಗಲೀ, ಆಚರಿಸಲ್ಪಡುವ ಧರ್ಮವು ''ಕಾಮ್ಯ'' ವೆಂದು ಹೇಳಲಾಗುತ್ತದೆ. ಅದನ್ನು ಆಚರಿಸಿದರೆ ಪುಣ್ಯ ಲಭಿಸುತ್ತದೆ. ಬಿಟ್ಟರೆ ಪಾಪವಿಲ್ಲ. ಈ ಮೂರು ವಿಧ ಕರ್ಮಗಳನ್ನು ಆಚರಿಸುವುದರಿಂದ ಮನುಷ್ಯರಿಗೆ ಪುಣ್ಯವು ಲಭಿಸುತ್ತದೆ.

ತ್ರಿವಿಧವಾಗಿರುವ ಕರ್ಮಗಳೂ ಒಂದೊಂದು ದ್ವಿವಿಧವೆಂದು ಹೇಳಲಾಗುತ್ತದೆ. ಸಬೀಜವೆಂದೂ, ನಿರ್ಬೀಜವೆಂದೂ ಕರ್ಮವು ಎರಡು ವಿಧ. ಸಬೀಜ ಕರ್ಮವೂ ಪುನಃ ಪುಣ್ಯಬೀಜವೆಂದೂ, ಪಾಪಬೀಜವೆಂದೂ ಎರಡು ವಿಧವಾಗಿರುತ್ತದೆ.

---

1. ಅನಾದಿಕರ್ಮಣಾ ಬದ್ಧಾ ಜೀವಾ ಈಶ್ವರಯಂತ್ರಿತಾಃ ।
ಭ್ರಮಂತಿ ಸಂಸೃತೌ ಸರ್ವೇ ಯಾವನ್ಮುಕ್ತಿರವಾಪ್ಯತೇ ॥ ಶ್ರೀವಿಷ್ಣುರಹಸ್ಯ (37-1)
2. ಕರ್ಮತದ್ದ್ವಿವಿಧಂ ಪ್ರೋಕ್ತಂ ಧರ್ಮಾಧರ್ಮವಿಭೇದತಃ ।
ಸುಖೈಕ ಕಾರಣಂ ಧರ್ಮೋಽಧರ್ಮೋ ದುಃಖೈಕ ಕಾರಣಂ ॥ ಶ್ರೀವಿಷ್ಣುರಹಸ್ಯ (37-2)

ದೃಢವಾದ ಆಸ್ತಿಕ್ಯ ಬುದ್ಧಿಯುಳ್ಳವನಾಗಿ, ಜ್ಞಾನಪೂರ್ವಕವಾಗಿ, ಶಾಠ್ಯವಿಲ್ಲದಂತೆ ಆಚರಿಸುವ ಕರ್ಮಗಳು ಪುಣ್ಯಬೀಜವೆಂದು ಹೇಳಲ್ಪಡುತ್ತವೆ.[3]

ಶರೀರ ಸಾಮರ್ಥ್ಯದಿಂದ ಸಾಧ್ಯವಾಗುವ ಕರ್ಮಗಳು ಕೆಲವು. ಮತ್ತೆ ಕೆಲವು ಕರ್ಮಗಳು ಧನದಿಂದ ಸಾಧ್ಯವಾಗುವವು. ದೇಶಕಾಲಗಳು ಸ್ವಸ್ಥವಾಗಿರುವಾಗ (ದುರ್ಭಿಕ್ಷ, ಅಶಾಂತಿಗಳು ಇಲ್ಲದಾಗ) ಸಾಧ್ಯವಾಗುವವು ಕೆಲವು. ಹೀಗೆ ಸಮಸ್ತ ಕರ್ಮಗಳೂ ಪರಿಸ್ಥಿತಿಗಳಿಗನುಗುಣವಾಗಿ ಸಂಭವಿಸುತ್ತವೆ. ಧನಸಾಧ್ಯಕರ್ಮಗಳಲ್ಲಿ ತನ್ನ ಧನಸಂಪತ್ತಿಗೆ ಯೋಗ್ಯವೆನಿಸುವ ಕರ್ಮವನ್ನಾಚರಿಸುವದು ಶಾಠ್ಯಹೀನ ಕರ್ಮವೆನಿಸುತ್ತದೆ.[4]

ಧನ ಶಕ್ತಿವಂಚನೆಯಿಂದ ಕರ್ಮಮಾಡುವದೂ ಶಾಠ್ಯವೆನಿಸುತ್ತದೆ. ಅಸೂಯೆ ಯಿಂದಾಗಲೀ, ಶಾಠ್ಯ, ಡಂಭ, ಲೋಭಾದಿಗಳಿಂದ ಮಾಡುವ ಪುಣ್ಯಕರ್ಮವೂ, ಮಾಡಿದ ಮೇಲೆ ಪಶ್ಚಾತ್ತಾಪಪಡುವುದೂ ಆದ ಯಾವುದೇ ಪುಣ್ಯ ಕರ್ಮವು ಪಾಪಬೀಜಕರ್ಮವೆನಿಸುತ್ತದೆ.[5]

ಪುಣ್ಯಫಲದಿಂದ ಲೋಕದಲ್ಲಿ ಮಾನವನು ದೃಢಕಾಯನೂ ಧನವಂತನೂ ಆಗುತ್ತಾನೆ. ಆ ಪುಣ್ಯವು, ಪುಣ್ಯಬೀಜ ಪುಣ್ಯವಾಗಿದ್ದರೆ, ತಪಸ್ಸು ದಾನ, ಮೊದಲಾದ ಪುಣ್ಯ ಕರ್ಮಗಳನ್ನೇ ಮಾಡಿ, ಪುಣ್ಯವನ್ನೇ ವೃದ್ಧಿಗೊಳಿಸಿಕೊಳ್ಳುತ್ತಾನೆ. ಒಂದು ವೇಳೆ ಆ ಪುಣ್ಯವು ಪಾಪಬೀಜ ಪುಣ್ಯವಾಗಿದ್ದರೆ, ದೇಹದಾರ್ಢ್ಯಧನಾದಿಗಳುಳ್ಳವನಾಗಿ, ನಿಷಿದ್ಧ ಭೋಗಗಳನ್ನು ಅನುಭವಿಸುತ್ತ, ಪರಹಿಂಸಾದಿ ಪಾಪಗಳನ್ನು ಮಾಡುವವನಾಗಿ, ಪಾಪವನ್ನೇ ಬೆಳೆಸಿಕೊಳ್ಳುತ್ತಾನೆ.

---

3. ಸಮ್ಯಗಾಸ್ತಿಕ್ಯಭಾವೇನ ಜ್ಞಾನಪೂರ್ವಂ ತು ಯತ್ಕೃತಂ ।
ಶಾಠ್ಯಹೀನಂ ತು ಯತ್ಕರ್ಮ ಪುಣ್ಯಬೀಜಂ ತದುಚ್ಯತೇ ॥ ಶ್ರೀವಿಷ್ಣುರಹಸ್ಯ (37-9)

4. ಶಾರೀರ ದಾರ್ಢ್ಯ ಸಾಧ್ಯಾನಿ ಧನಸಾಧ್ಯಾನಿ ಕಾನಿಚಿತ್ ।
ದೇಶಕಾಲ ಸ್ವಾಸ್ಥ್ಯ ಸಾಧ್ಯಾನ್ಯೇವಂ ಕರ್ಮಾಣಿ ಸರ್ವಶಃ ।
ಯಥಾ ಸಂಪತ್ತಿ ಯತ್ಕರ್ಮ ಶಾಠ್ಯಹೀನಂ ತು ತತ್ ಸ್ಮೃತಮ್ ॥ ,, (37-11)

5. ಶಕ್ತಿ ವಂಚನತೋ ಯತ್ಸ್ಯಾತ್ ಶಾಠ್ಯಂ ತಚ್ಚ ಪ್ರಕೀರ್ತಿತಂ ।
ಅಸೂಯಯಾ ವಾ ಶಾಠ್ಯೇನ ದಂಭ ಲೋಭಾದಿನಾ ಕೃತಂ ।
ಪಶ್ಚಾತ್ತಪ್ತಂ ಚ ಯತ್ಪುಣ್ಯಂ ಪಾಪಬೀಜಂ ತದುಚ್ಯತೇ ॥ ,, (37-12)

ಜ್ಞಾತಫಲ, ಅಜ್ಞಾತಫಲವೆಂಬ ಭೇದದಿಂದ ನಿರ್ಬೀಜ ಪುಣ್ಯಕರ್ಮವು ಎರಡು ವಿಧವಾಗಿದೆ. ಕರ್ಮಫಲದಲ್ಲಿ ಶ್ರದ್ಧೆಯಿಲ್ಲದೇ ಅಥವಾ ಕೇವಲ ಪ್ರಸಂಗ ಬಲದಿಂದ, ಅಥವಾ ತನ್ನ ಹಿರಿಯರು ಆ ಕರ್ಮವನ್ನು ಆಚರಿಸುವುದನ್ನು ಕಂಡು ಭಯದಿಂದಲೇ ಅಥವಾ ಉದಾಸೀನ ಬುದ್ಧಿಯಿಂದ ಕರ್ಮಫಲವನ್ನು ತಿಳಿದು ಮಾಡಿದ ಕರ್ಮವು "ಜ್ಞಾತಫಲಕರ್ಮ"ವೆನಿಸುತ್ತದೆ. ಆ ಕರ್ಮವು ಶಾಸ್ತ್ರದಿಂದ ನಿಷೇಧಿಸಲ್ಪಡದ ಸುಖಭೋಗವನ್ನಿತ್ತು ನಷ್ಟವಾಗುತ್ತದೆ.

ಅಜ್ಞಾನಾವಸ್ಥೆಯಲ್ಲಿದ್ದ ತನ್ನಿಂದಾಗಲೀ ಅಥವಾ ತನ್ನ ಭಾರ್ಯಾಪುತ್ರರಿಂದಾಗಲೀ ಮಾಡಲ್ಪಡುವ ಪುಣ್ಯ ಕರ್ಮವು, ಆ ಕರ್ಮವು ಘಟಿಸಿದ ನಂತರವೂ ತನಗೆ ತಿಳಿಯದಿದ್ದರೆ, ಅದು "ಅಜ್ಞಾತಫಲಕರ್ಮ" ವೆನಿಸುತ್ತದೆ. (ಪುಣ್ಯಕರ್ಮವು ತಿಳಿಯಲ್ಪಡದಿದ್ದರೂ ಅದರ ಫಲವನ್ನು ಅನುಭವಿಸುವುದು ಈ ಕರ್ಮದ ಲಕ್ಷಣ) ಈ ಅಜ್ಞಾತಕರ್ಮಫಲವಾದ ಸುವರ್ಣ, ವಸ್ತ್ರ ರತ್ನಾದಿಗಳ ಭೋಗವೂ, ಬಾಲ್ಯ, ಪಶುದೇಹ, ನಿದ್ರಾದಿ ಅಜ್ಞಾನಾವಸ್ಥೆಗಳಲ್ಲಿಯೇ ಲಭಿಸುತ್ತದೆ.

ಅಜ್ಞಾತಫಲಕರ್ಮವು, ಒಂದು ವೇಳೆ ಕರ್ಮವು ಸಂಭವಿಸಿದ ನಂತರ ತಿಳಿದು ಬಂದಿದ್ದರೆ: ಅಥವಾ ಕರ್ಮವು ಸಂಘಟಿಸುವ ಮೊದಲೇ ಅದಕ್ಕೆ ಈತನು ಅನುಮೋದಿಸಿದ್ದಾದರೆ (ಒಪ್ಪಿಗೆಯನ್ನಿತ್ತಿದ್ದರೆ) ಆ ಕರ್ಮಫಲಗಳಾದ ಸುವರ್ಣಾದಿಗಳ ಭೋಗವೂ, ಅಜ್ಞಾನಾವಸ್ಥೆಯ ನಂತರ ಅಥವಾ ಆ ಮೊದಲು ತಿಳಿಯಲ್ಪಟ್ಟದ್ದಾಗಿರುತ್ತದೆ.

ಶ್ರೀವಿಷ್ಣುವನ್ನು ಉದ್ದೇಶಿಸಿ ಮಾಡಲ್ಪಟ್ಟ ಸತ್ಕರ್ಮವು (ಪುಣ್ಯಕರ್ಮವು) ಶ್ರೀವಿಷ್ಣುವಿನಲ್ಲಿಯೇ ಭಕ್ತಿಪೂರ್ವಕ ಸಮರ್ಪಿಸಲ್ಪಟ್ಟದ್ದಾದರೆ, ಆ ಕರ್ಮಕ್ಕೆ ಅಧಿಕ ಫಲವು ದೊರೆಯುವದಲ್ಲದೇ, ಅದು ಮೋಕ್ಷ (ಹೇತು) ಬೀಜವೂ ಆಗುತ್ತದೆ. ಅನ್ಯದೇವತೆಗಳಲ್ಲಿ ಅರ್ಪಿತವಾದ ಸತ್ಕರ್ಮವು, ಆಯಾ ದೇವತೆಯ ವಶಕ್ಕೆ ಸೇರಿ, ಶ್ರೀವಿಷ್ಣು ಪ್ರೇರಣೆಯಂತೆ ಅವರು ಫಲವನ್ನಿತ್ತರೂ, ಆ ಕರ್ಮವು ಅಲ್ಪಫಲಪ್ರದವಾಗುತ್ತದೆ ಅಲ್ಲದೇ ಅದು ಮೋಕ್ಷ ಬೀಜವಾಗುವದಿಲ್ಲ.[6]

---

6. ಸತ್ಕರ್ಮ ವಿಷ್ಣುಮುದ್ದಿಶ್ಯ ಕೃತಂ ತಸ್ಮಿನ್ ಸಮರ್ಪಿತಂ ।
ಫಲಾಧಿಕ್ಯಂ ಭವೇತ್ತಸ್ಯ ಮೋಕ್ಷಬೀಜಂ ಚ ಜಾಯತೇ ॥ ಶ್ರೀವಿಷ್ಣುರಹಸ್ಯ 37-21
ಅನ್ಯಸ್ಮಿನ್ನರ್ಪಿತಂ ಯತ್ತು ತತ್ತದ್ದೈವ ವಶಂ ತು ತತ್ ।
ಫಲೇ ನ್ಯೂನಂ ಭವೇತ್ತಚ್ಚ ಮೋಕ್ಷಬೀಜಂ ನ ಜಾಯತೇ ॥ ,, 37-22

ಸರ್ವರ ಮನೋನಿಯಾಮಕನಾಗಿ, ಸರ್ವಜೀವರಲ್ಲಿ ಸ್ಥಿತನಾಗಿರುವ ಶ್ರೀಹರಿಯೇ ಸ್ವತಂತ್ರಕರ್ತನು (ಜೀವರು ಆತನು ಮಾಡಿದುದನ್ನೇ ಮಾಡುವ ಪರಾಧೀನಕರ್ತರು). ಸಾಕ್ಷಾತ್ತಾಗಿ ತಾನೇ ಅಥವಾ ಅನ್ಯರದ್ವಾರಾ ವಿವಿಧ ಫಲಗಳನ್ನು ಉತ್ಪಾದಿಸುವವನು ಶ್ರೀವಿಷ್ಣುವೇ ಎಂದು ತಿಳಿಯಬೇಕು.[7]



7. ಸರ್ವೇಷ್ವಪಿ ಸ್ಥಿತೋ ವಿಷ್ಣುಃ ಸರ್ವಕರ್ತಾಖಿಲಾಶಯಃ ।
ಸಾಕ್ಷಾತ್ ಪರಂಪರಾಯೋಗಾತ್ ಫಲವೈಚಿತ್ರ್ಯಕೃದ್ಭವೇತ್ ॥ ಶ್ರೀವಿಷ್ಣುರಹಸ್ಯ 37-23

# ಜೀವನು ಭಗವಂತನ ಪ್ರತಿಬಿಂಬನು

ಈ ಪ್ರಪಂಚದಲ್ಲಿರುವ ಎಲ್ಲ ಜೀವರು ಭಗವಂತನ ಪ್ರತಿಬಿಂಬರು. ಇಲ್ಲಿ ಪ್ರತಿಬಿಂಬವೆಂದರೆ ಭಗವಂತನ ಅಧೀನದಲ್ಲಿದ್ದು ಅವನಿಗೆ ಕಿಂಚಿತ್ ಸದೃಶರಾಗಿರುವ-ರೆಂದು ಅರ್ಥವು. (ತದಧೀನತ್ವೇ ಸತಿ ಕಿಂಚಿತ್ ತತ್ ಸದೃಶತ್ವಮ್ ಪ್ರತಿಬಿಂಬತ್ವಮ್).

ಈ ವಿಷಯವನ್ನು ಕಾಠಕೋಪನಿಷತ್ತು ತಿಳಿಸಿಕೊಡುತ್ತಿದೆ-

ಲೋಕವನ್ನು ಪ್ರವೇಶಿಸಿದ ಅಗ್ನಿದೇವತೆಯು ಒಬ್ಬನೇ. ಅಡಿಗೆ ಪಕ್ವ ಮಾಡುವ ಅಗ್ನಿಯು ಅವನೇ ನೀರು ಕಾಯಿಸುವ ಅಗ್ನಿ ಅವನೇ ಆಹುತಿಯನ್ನು ಸ್ವೀಕರಿಸುವ ಅಗ್ನಿಯು ಅವನೇ. ಈ ಚೇತನಾಗ್ನಿಯನ್ನು ಬಿಂಬನೆಂದೂ, ಅಚೇತನಾಗ್ನಿಗಳನ್ನು ಪ್ರತಿಬಿಂಬಗಳೆಂದೂ ಕರೆಯುತ್ತಾರೆ. ಅಂದರೆ ಯಾವುದು ಯಾವುದಕ್ಕೆ ಅಧೀನವಾಗಿದ್ದು ಸ್ವಲ್ಪಮಟ್ಟಿಗೆ ಅದರ ಹಾಗೆಯೇ ಇರುವುದೋ ಅದಕ್ಕೆ ಪ್ರತಿಬಿಂಬವೆಂದು ಕರೆಯುತ್ತಾರೆ. ಅದರಂತೆ ಎಲ್ಲ ಜೀವರಲ್ಲಿ ಪ್ರವೇಶಿಸಿರುವ ಭಗವಂತ ಒಬ್ಬನೇ. ಅವನೇ ಸರ್ವತಂತ್ರಸ್ವತಂತ್ರನು. ಜೀವರು ಸ್ವತಂತ್ರರಲ್ಲ. ಆದರೂ ಸರ್ವಜೀವರ ಹೃದಯದಲ್ಲಿ ನಿಯಾಮಕನಾದ ಭಗವಂತನ ಬಿಂಬರೂಪಕ್ಕೆ ಪ್ರತಿಯಾಗಿ ಆಯಾ ದೇಹದಲ್ಲಿ ಇರುವ ಜೀವರು ಪ್ರತಿಬಿಂಬರಾಗಿದ್ದಾರೆ.[1]

ಈ ವಿಷಯವನ್ನು ಓಂ ಆಭಾಸ ಏವ ಚ ಓಂ (ಬ್ರಹ್ಮಸೂತ್ರ 2-3-49) ಎಂಬ ಸೂತ್ರದಲ್ಲಿ ಪ್ರತಿಪಾದಿಸಿರುವರು.

ಚೇತನವಾಯು ಒಬ್ಬನೇ ಲೋಕವನ್ನು ಪ್ರವೇಶಿಸಿದ್ದಾನೆ. ಜೀವರಿಗೆ ಅವನು ಧಾರಕನಾಗಿದ್ದಾನೆ. ಆದರೂ ಚೇತನವಾಯುವಿಗೆ (ವಾಯುದೇವನಿಗೆ) ಅನೇಕ ಜಡವಾಯುಗಳು ಪ್ರತಿಬಿಂಬವಾಗಿವೆ. ಸ್ಪರ್ಶದಿಂದ ಅವುಗಳ ಜ್ಞಾನವಾಗುತ್ತದೆ. ಅದರಂತೆ ಸರ್ವಜೀವರಲ್ಲಿ ಅಂತರ್ಯಾಮಿಯಾದ ಸ್ವತಂತ್ರನಾದ, ಜೀವರಿಗೆ ಬಿಂಬರೂಪನಾದ ಭಗವಂತನು ಒಬ್ಬನೇ ಆಗಿದ್ದರೂ, ಬೇರೆ ಬೇರೆ ದೇಹಗಳಲ್ಲಿರುವ

---

1. ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವ ಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ ಕಾಠಕೋಪನಿಷತ್ತು (2-2-9)

ಜೀವರು ಅವನಿಗೆ ಪ್ರತಿಬಿಂಬರಾಗಿದ್ದಾರೆ. ಮತ್ತು ಬಿಂಬದಿಂದ ಅತ್ಯಂತ ಭಿನ್ನರಾಗಿದ್ದಾರೆ. ಹೀಗೆ ಅನಾದಿಯಾಗಿ ಪ್ರತಿಬಿಂಬರಾದ ಜೀವರು ಅನಂತ ಸಂಖ್ಯೆಯುಳ್ಳವರಾಗಿದ್ದಾರೆ.[2]

**ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾದಶ ॥**

(ಋಗ್ವೇದ 6-40-18)

ಈ ಮಂತ್ರವು, ಜೀವನು ಭಗವಂತನ ಪ್ರತಿಬಿಂಬ ಎಂಬ ವಿಷಯವನ್ನು ತಿಳಿಸಿಕೊಡುತ್ತಿದೆ. ತ್ರಿವಿಧ ಜೀವಸಮೂಹವು ಭಗವಂತನ ಪ್ರತಿಬಿಂಬವಾಗಿರುತ್ತದೆ.

ಭಗವದ್ಗೀತೆಯಲ್ಲಿ ಕೂಡ ಈ ಬಿಂಬ ಪ್ರತಿಬಿಂಬ ಭಾವವನ್ನು ತಿಳಿಸಿಕೊಟ್ಟಿದ್ದಾರೆ.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ (2-18)**

ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಅಪೂರ್ಣತಾ ಎಂಬ ನಾಲ್ಕುವಿಧ ನಾಶರಹಿತನಾದ ಸಂಪೂರ್ಣವಾಗಿ ತಿಳಿಯಲಶಕ್ಯನಾದ ಭಗವಂತನ ಪ್ರತಿಬಿಂಬರಾದ ಸ್ವರೂಪತಃ ನಾಶವಿಲ್ಲದ ಸಂಸಾರಿ ಜೀವರ, ಕಣ್ಣಿಗೆ ಕಾಣುವ ಪಾಂಚಭೌತಿಕ ಶರೀರಗಳು ನಾಶವುಳ್ಳವುಗಳಾಗಿವೆ.

ಜೀವರು ಭಗವಂತನ ಪ್ರತಿಬಿಂಬರು ಎಂದು ಇಲ್ಲಿ ತಿಳಿಸಿದ್ದಾರೆ. ಪ್ರತಿಬಿಂಬವು ಕಾಣಬೇಕಾದರೆ ಉಪಾಧಿಯೊಂದು ಇರಬೇಕು ಉದಾ.: ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ಪ್ರತಿಬಿಂಬವೊಂದು ಕಾಣಿಸುತ್ತದೆ. ಇಲ್ಲಿ ಮನುಷ್ಯನು ಬಿಂಬ, ಕನ್ನಡಿಯು ಉಪಾಧಿ, ಕನ್ನಡಿಯಲ್ಲಿ ಕಾಣುವ ಮನುಷ್ಯನ ಆಕೃತಿ ಪ್ರತಿಬಿಂಬವಾಗಿದೆ, ಇದರಂತೆ ಬಿಂಬ ಪ್ರತಿಬಿಂಬರೆನಿಸಿದ ಭಗವಂತನಿಗೂ ಜೀವರಿಗೂ ಒಂದು ಉಪಾಧಿ ಇರಲೇಬೇಕು. ಈ ಉಪಾಧಿಯು ಜೀವನ ದೇಹವೇ ಆಗಿದೆ. ದೇಹವು ನಾಶವುಳ್ಳದ್ದೆಂದು ಮೊದಲೇ ಹೇಳಿದೆ. ಕನ್ನಡಿಯು ನಾಶವಾದರೆ ಪ್ರತಿಬಿಂಬವು ನಾಶವಾಗುತ್ತದೆ. ಮತ್ತು ಮುಖದ ಎದುರಿನಿಂದ ಕನ್ನಡಿ ತೆಗೆದರೂ ಪ್ರತಿಬಿಂಬ ಕಾಣುವುದಿಲ್ಲ. ಹೀಗೆ

---

2. ವಾಯುರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ ಕಾಠಕೋಪನಿಷತ್ತು (2-2-10)

ಉಪಾಧಿನಾಶದಿಂದ ಪ್ರತಿಬಿಂಬ ನಾಶವೆಂದು ಹೇಳಿದರೆ ದೇಹನಾಶದಿಂದ ಪ್ರತಿಬಿಂಬವಾದ ಜೀವನನಾಶವೂ ಆಗಬೇಕಾಗುತ್ತದೆ. ಇದರಿಂದ ಜೀವನು ನಿತ್ಯನಲ್ಲವೆಂದು ಹೇಳಬೇಕಾದ ಪ್ರಸಂಗ ಬರುತ್ತದೆ. ಕನ್ನಡಿಯ ದೃಷ್ಟಾಂತದಿಂದ ಜೀವನ ನಿತ್ಯತ್ವದ ಕುರಿತು ನಿರ್ಣಯ ತೆಗೆದುಕೊಳ್ಳಲು ಸಾಧ್ಯವಿಲ್ಲ. ಕಾರಣವೆಂದರೆ ಜೀವನಿಗೆ ಎರಡು ಉಪಾಧಿಗಳಿವೆ. ಒಂದು ನಿತ್ಯವಾದ ಉಪಾಧಿ- ಇನ್ನೊಂದು ಅನಿತ್ಯವಾದ ಉಪಾಧಿ. ಜೀವನ ಪಾಂಚಭೌತಿಕ ಶರೀರವು ಅನಿತ್ಯವಾದ ಬಾಹ್ಯ ಉಪಾಧಿ ಎನಿಸುತ್ತದೆ. ಇದಕ್ಕೆ ನಾಶವಿದೆ. ಇವು ಜೀವನಿಗೆ ಅನೇಕವಾಗಿವೆ. ಜೀವನ ಸ್ವರೂಪ ಶರೀರವು ನಿತ್ಯವಾದುದು. ಇದು ಶಾಶ್ವತವಾದ್ದರಿಂದ ಇದಕ್ಕೆ ನಾಶವಿಲ್ಲ ಆದ್ದರಿಂದ ಜೀವನ ನಾಶವೂ ಇಲ್ಲ. ಭಗವಂತನು ಸರ್ವತ್ರ ವ್ಯಾಪ್ತನಾದ ಕಾರಣ ಜೀವನಿಗೆ ಆ ಭಗವಂತನ ಸಾನ್ನಿಧ್ಯವು ಯಾವಾಗಲೂ ಇರುತ್ತದೆ. ಭಗವಂತನಿಗೆ ನಾಶ ಇಲ್ಲವೇ ಇಲ್ಲ, ಆದ್ದರಿಂದ ಜೀವನು ನಿತ್ಯವೇ ಆಗಿದ್ದಾನೆ. ಕೊನೆಯದಾಗಿ - ಭಗವಂತನು ನಿತ್ಯನಾದ ಪ್ರಯುಕ್ತ (ನಿತ್ಯೋನಿತ್ಯಾನಾಂ ಶ್ರುತಿಯ ಪ್ರಕಾರ) ಅವನ ಪ್ರತಿಬಿಂಬನಾದ ಜೀವನು ನಿತ್ಯನಾಗಿದ್ದಾನೆ.

ಹೀಗೆ ಬಿಂಬನಾಶ, ಸನ್ನಿಧಿನಾಶ, ಉಪಾಧಿನಾಶ ಇವು ಇಲ್ಲದ ಪ್ರಯುಕ್ತ ಪ್ರತಿಬಿಂಬನಾದ ಜೀವನಿಗೆ ನಾಶವು ಇಲ್ಲವೇ ಇಲ್ಲ, ಆದ್ದರಿಂದ ಪ್ರತಿಬಿಂಬನಾದ ಜೀವನು ನಿತ್ಯನೇ ಆಗಿದ್ದಾನೆ. ಅವನ ಪಾಂಚಭೌತಿಕ ಶರೀರಗಳು ನಾಶವುಳ್ಳವುಗಳಾಗಿವೆ.

ಇನ್ನು ''ಬಿಂಬ ಕ್ರಿಯಯೈವ ಕ್ರಿಯಾವಾನ್'' ಉಕ್ತಿಯಂತೆ ಪ್ರತಿಬಿಂಬನಾದ ಜೀವನು ಬಿಂಬನಾದ ಭಗವಂತನ ಅಧೀನನು. ಪ್ರತಿಬಿಂಬಕ್ಕೆ ಕ್ರಿಯಾದಿಗಳೇ ಇಲ್ಲ, ಆದರೆ ಕಾಣುವದೆಲ್ಲವೂ ಬಿಂಬನದ್ದೇ ಆಗಿರುತ್ತದೆ. ಇಲ್ಲಿ ''ಬಿಂಬಃ ಅವಿನಾಭೂತಃ ಪ್ರತಿಬಿಂಬ'' ಉಕ್ತಿಯನ್ನು ಮರೆಯಲಾಗದು-

ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ॥ (2-3-30) ಈ ಬ್ರಹ್ಮಸೂತ್ರದಲ್ಲಿ ಬಿಂಬನಾದ ಭಗವಂತನು ನಿತ್ಯನಾದ ಪ್ರಯುಕ್ತ ಪ್ರತಿಬಿಂಬನಾದ ಜೀವನು ಕೂಡ ನಿತ್ಯನೇ ಆಗಿದ್ದಾನೆಂಬುದಾಗಿ ತಿಳಿಸಿದ್ದಾರೆ.

(ನಿತ್ಯ ಏವ ಜೀವಃ। ಪ್ರತಿಬಿಂಬಸ್ಯ ಬಿಂಬೋಪಾಧಿ ತತ್ಸನ್ನಿಧಿನಾಶಂ ವಿನಾ ನಾಶಾನುಪಪತ್ತೇಃ। ಬಿಂಬಸ್ಯ ಪರಮಾತ್ಮ ನೋಽನಾದ್ಯನಂತತ್ವಾತ್ ॥)



# ಜೀವನು ಭಗವಂತನ ಭಿನ್ನಾಂಶನು.

ಜೀವನು ಭಗವಂತನ ಅಂಶನೇ. ಅಂಶನೆಂದರೆ ಅತ್ಯಲ್ಪ ಸಾಮರ್ಥ್ಯವುಳ್ಳವನು ಅಧೀನನು ಎಂದರ್ಥವು. ಇಂಥ ಅಂಶತೆಯು (ಪುತ್ರಾದಿಗಳಂತೆ) ಅವಿರುದ್ಧವೇ. ಆದ್ದರಿಂದ ಜೀವರು ಭಗವಂತನ ಅಂಶರೂ ಹೌದು ಅವನಿಂದ ಭಿನ್ನರೂ ಹೌದು.

ಅಂಶವು ಸ್ವಾಂಶ ಮತ್ತು ಭಿನ್ನಾಂಶವೆಂದು ಎರಡು ವಿಧ. ಸ್ವಾಂಶಗಳೆಂದರೆ ಸ್ವಾಭಿನ್ನ ಮತ್ಸ್ಯಾದಿರೂಪಗಳು. ಭಿನ್ನಾಂಶಗಳೆಂದರೆ ಉಪಜೀವ್ಯಗಳಾದ ಬ್ರಹ್ಮಾದಿ ಜೀವರಾಶಿಯು. ಆದ್ದರಿಂದ ಪುರುಷಸೂಕ್ತದಲ್ಲಿ ''ಪಾದೋऽಸ್ಯ ವಿಶ್ವಾಭೂತಾನಿ'' ಎಂಬುದಾಗಿ ಹೇಳುತ್ತ ಸಕಲ ಜೀವರು ಭಗವಂತನ ಭಿನ್ನಾಂಶರು ಎಂದು ಹೇಳಿದೆ.

ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ತಿಳಿಸಿದ್ದಾನೆ.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ॥** 15-7.

ಬ್ರಹ್ಮಾದಿ ಸಮಸ್ತ ಜೀವರ ಶರೀರದಲ್ಲಿರುವ ಅನಾದಿನಿತ್ಯನಾದ ಜೀವನು ಭಗವಂತನ ಭಿನ್ನಾಂಶನು.

ಅದ್ವೈತಿಗಳು ಈ ಶ್ಲೋಕದ ವ್ಯಾಖ್ಯಾನದಲ್ಲಿ ''ಜೀವನು ನಿರವಯವನಾದ ಬ್ರಹ್ಮನ ಅಂಶವು'' ಎನ್ನುವದು ಕೂಡುವದಿಲ್ಲವಾದ್ದರಿಂದ ''ಅಂಶ ಇವ'' ಜೀವನು ಭಗವಂತನಿಗೆ ಸದೃಶನೇ ಹೊರತು ಅಂಶವೇ ಅಲ್ಲ ಎಂದು ಪ್ರತಿಪಾದಿಸಿದ್ದಾರೆ ಇದು ಸರಿಯಲ್ಲ.

ಶ್ರೀಮದಾನಂದತೀರ್ಥಭಗವತ್ಪಾದರು ತಮ್ಮ ಗೀತಾತಾತ್ಪರ್ಯದಲ್ಲಿ ಹೀಗೆ ತಿಳಿಸಿದ್ದಾರೆ. ಜೀವರು ಭಗವಂತನಿಂದ ಭಿನ್ನರಾದರೂ ಜ್ಞಾನಆನಂದರೂಪವಾದ ಕಿಂಚಿತ್ ಸಾದೃಶ್ಯದಿಂದ ಅಂಶಾಭಾಸರೆನಿಸುತ್ತಾರೆ. ಭಗವಂತನು ಜೀವರ ಶರೀರದಲ್ಲಿ ಪ್ರವೇಶಮಾಡಿ ಮನಸ್ಸೇ ಮೊದಲಾದ ಆರು ಇಂದ್ರಿಯಗಳನ್ನು ಶಬ್ದಾದಿ ವಿಷಯಗಳ ಕಡೆಗೆ ಪ್ರೇರಿಸುತ್ತಾನೆ. ಹೀಗೆ ಜೀವರ ಇಂದ್ರಿಯ ಪ್ರವೃತ್ತ್ಯಾದಿಗಳು ಭಗವಂತನ ಅಧೀನವಾದ್ದರಿಂದ ಅವನಿಗೆ ಶರಣಾಗತರಾಗುವುದರಿಂದಲೇ ಸಂಸಾರವೃಕ್ಷದ ಛೇದವು ಸಾಧ್ಯವಾಗುತ್ತದೆ.[1]

---

1. ಕಿಂಚಿತ್ ಸಾದೃಶ್ಯ ಮಾತ್ರೇಣ ಭಿನ್ನೋऽಪ್ಯಂಶ ಇವೋಚ್ಯತೇ ।
ಈಶ್ವರಸ್ತು ಯದಾತ್ಮಸ್ಯ ಶರೀರಂ ವಿಶತಿ ಪ್ರಭುಃ ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿ ಸ್ಥಾನಿ ಕರ್ಷತಿ ॥ ಶಬ್ದಾದೀನ್ ಪ್ರತಿ (ಗೀತಾ ತಾತ್ಪರ್ಯ)

ಜೀವನು ಭಗವಂತನ ಭಿನ್ನಾಂಶನು ಮತ್ಸ್ಯಾದಿ ಅವತಾರಗಳು ಭಗವಂತನ ಸ್ವರೂಪಾಂಶಗಳು. ಭಗವಂತನಿಗೂ ಅವನ ಸ್ವರೂಪಾಂಶಕ್ಕೂ ಯಾವ ಭೇದವಿಲ್ಲ. ಸೂರ್ಯನಿಗೂ ಮಿಂಚುಹುಳಕ್ಕೂ ಪ್ರಕಾಶದಲ್ಲಿ ಕಿಂಚಿತ್ ಸಾದೃಶ್ಯವಿದೆ. ಆದ್ದರಿಂದ ಅದು ಸೂರ್ಯನ ಭಿನ್ನಾಂಶವಾಗಿದೆ. ಬ್ರಹ್ಮಾದಿಗಳು ಭಗವಂತನು ಅಂಶಾಭಾಸರು ಅಂದರೆ ಭಗವಂತನ ಅಧೀನರು. ಭಗವಂತನೇ ನಿಯಾಮಕನು ಮತ್ತು ಸ್ವತಂತ್ರನು.

ಶ್ರೀಮದ್‌ಭಾಗವತ ಪ್ರಥಮ ಸ್ಕಂಧದಲ್ಲಿ ಪದ್ಮನಾಭಾದಿರೂಪಗಳನ್ನು ವರ್ಣಿಸುತ್ತಾ ಮತ್ಸ್ಯಾದಿರೂಪಗಳೆಲ್ಲವೂ ಭಗವಂತನ ಸ್ವಾಂಶಗಳೆಂದು ಹೇಳಿ, ಭಗವಂತನನ್ನು ಅರಿಯದ ಪ್ರಯುಕ್ತ ಅಜ್ಞಾನ ಮೂಲಕ ಪುನಃ ಪುನಃ ಜನ್ಮಾದಿಗಳನ್ನು ತಾಳುವವನೇ ಜೀವನು ಎಂದು ಹೇಳಿದ್ದಾರೆ. ಅಂಶನಾದರೂ ಜೀವನು ಭಗವಂತನಿಂದ ಸುತರಾಂ ಭಿನ್ನನೆಂದು ತಿಳಿಯಬೇಕು.

ವರಾಹಪುರಾಣದಲ್ಲಿ ಭಗವಂತನಿಗೆ ಪ್ರತಿಬಿಂಬಾಂಶವೆಂದೂ, ಸ್ವರೂಪಾಂಶವೆಂದೂ ಎರಡು ಅಂಶಗಳಿವೆಯೆಂದು ತಿಳಿಸಿದ್ದಾರೆ. ಜೀವರು ಪ್ರತಿಬಿಂಬಾಂಶರು. ಪ್ರಾದುರ್ಭಾವಾದಿಗಳುಳ್ಳ ಭಗವಂತನ ಮತ್ಸ್ಯಾದಿರೂಪಗಳು ಸ್ವರೂಪಾಂಶಗಳು. ಜೀವನು ಭಗವಂತನ ಅಂಶನಾದರೂ ಭಿನ್ನನು ಎಂದು ತಿಳಿಯಬೇಕು. ಸೂತ್ರಕಾರರು –

1. ಓಂ ಅಂಶೋ ನಾನಾವ್ಯಪದೇಶಾತ್ ಅನ್ಯಥಾ ಚಾಪಿ
   ದಾಶಕಿತ ವಾದಿತ್ವಮಧೀಯತ ಏಕೇ ಓಂ ॥ 2–3–43
2. ಓಂ ಮಂತ್ರವರ್ಣಾತ್ ಓಂ ॥ 2–3–44
3. ಓಂ ಅಪಿಸ್ಮರ್ಯತೇ ಓಂ ॥ 2–3–45
4. ಓಂ ಪ್ರಕಾಶಾದಿವನ್ನೈವಂ ಪರಃ ಓಂ ॥ 2–3–46

ಇತ್ಯಾದಿ ಸೂತ್ರಗಳಲ್ಲಿ ಜೀವನು ಭಗವಂತನ ಭಿನ್ನಾಂಶವೆಂಬುದಾಗಿ ಪ್ರತಿಪಾದಿಸಿದ್ದಾರೆ.

"ಅಂಶಾ ಏವ ಹೀಮೇ ಜೀವಾ ಅಂಶೀ ಹಿ ಪರಮೇಶ್ವರಃ ಎಂಬುದನ್ನು ಮರೆಯಲಾಗದು."



# ಜೀವನು ತನ್ನ ಜೊತೆಗಿರುವ ಭಗವಂತನನ್ನು ತಿಳಿದಿಲ್ಲ ಏಕೆ?

''ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ'' ಎಂಬ ಶ್ರುತಿಯು ಜೀವಾತ್ಮ ಹಾಗೂ ಪರಮಾತ್ಮರೆಂಬ ಎರಡು ಪಕ್ಷಿಗಳು ಒಂದೇ ಶರೀರದಲ್ಲಿ ಪರಸ್ಪರ ಸಖ್ಯರೂಪದಿಂದ ಇರುತ್ತವೆಂದು ತಿಳಿಸುತ್ತದೆ. ಆದರೆ ಜೀವಾತ್ಮನು ಭಗವಂತನ ಜೊತೆಯಲ್ಲೇ ಇದ್ದರೂ ಆ ಭಗವಂತನನ್ನು ತಿಳಿದಿಲ್ಲ. ಇದಕ್ಕೆ ಕಾರಣವನ್ನು ಶ್ರೀಮದ್ ಭಾಗವತದಲ್ಲಿ ತಿಳಿಸಿಕೊಟ್ಟಿದ್ದಾರೆ.

**ನ ಯಸ್ಯ ಸಖ್ಯಂ ಪುರುಷೋ ವೇತ್ತಿ ಸಖ್ಯುಃ**
**ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।**
**ಗುಣೋ ಯಥಾ ಗುಣಿನೋಽವ್ಯಕ್ತ ದೃಷ್ಟಿ**
**ಸ್ತಸ್ಮೈ ಮಹೇಶಾಯ ನಮಸ್ಕರೋಮಿ ॥** (6-4-24)

ಜೀವನು ತನ್ನ ಕರ್ಮಾನುಗುಣವಾಗಿ ಶ್ರೀಹರಿಯಿಂದ ಕೊಡಲ್ಪಟ್ಟ ಈ ದೇಹದಲ್ಲಿ ಇರುತ್ತ ಜೊತೆ ಜೊತೆಗೆ ವಾಸಿಸುವ. ದುಃಖಾದ್ಯನುಭವರಹಿತನಾದ, ಸ್ನೇಹಿತನಾದ ಶ್ರೀಹರಿಯ ಶರೀರೇಂದ್ರಿಯ ಪ್ರವರ್ತಕರೂಪವಾದ ಸ್ನೇಹವನ್ನು ತಿಳಿಯುವದೇ ಇಲ್ಲ ಕಾರಣವೇನು? ಎಂದರೆ ಉದಾಹರಣಪೂರ್ವಕ ಹೇಳುತ್ತಾರೆ. ಸ್ಥೂಲಜ್ಞಾನಿಯಾದ ಭೃತ್ಯನು ರಾಜನ ಸ್ನೇಹವನ್ನು (ಇವನು ನನ್ನ ಸ್ನೇಹಿತನೆಂಬ ರಾಜನ ಗಂಭೀರ ಅಭಿಪ್ರಾಯವನ್ನು) ತಿಳಿಯದಿರುವಂತೆ ಶ್ರೀಹರಿಯು ಮುಕ್ತಿಯೋಗ್ಯ ಜೀವನನ್ನು ತನ್ನ ಸ್ನೇಹಿತನೆಂದು ತಿಳಿದಿರುವ ಅಭಿಪ್ರಾಯವನ್ನು ಜೊತೆಗಿರುವ ಸ್ಥೂಲದೃಷ್ಟಿಯುಳ್ಳ ಜೀವನು ತಿಳಿಯುವುದಿಲ್ಲ.

ಈ ಕೆಳಗಿನ ಪುರಾಣ ವಚನವು ಇದನ್ನೇ ಸಮರ್ಥಿಸುತ್ತದೆ.

**ಯಥಾ ರಾಜ್ಞಃ ಪ್ರಿಯತ್ವಂ ತು ಭೃತ್ಯೋ ವೇದ ನ ಚಾತ್ಮನಃ ।**
**ತಥಾ ಜೀವೋ ನ ಯತ್ಸಖ್ಯಂ ವೇತ್ತಿ ತಸ್ಮೈ ನಮೋಽಸ್ತುತೇ ॥**

ಈ ವಿಷಯವು ಶ್ರೀಮದ್‌ಭಾಗವತ ತೃತೀಯ ಸ್ಕಂಧದಲ್ಲೂ ಉಕ್ತವಾಗಿರುವುದು ಗಮನಾರ್ಹ.

ಯೇ ಸಂವಸಂತೋ ನ ವಿದುರ್ಹರಿಂ ಮೀನಾ ಇವೋಡುಪಮ್ ॥ (3-2-8)

ನೀರಲ್ಲಿರುವ ಮೀನುಗಳು ಅಲ್ಲಿ ಪ್ರತಿಬಿಂಬಿತನಾದ ಚಂದ್ರನನ್ನು ತಿಳಿಯದಿರುವಂತೆ ಶ್ರೀಹರಿಯ ಜೊತೆಯಲ್ಲೇ ವಾಸಿಸುತ್ತಿದ್ದರೂ ಜೀವನು ಆ ಶ್ರೀಹರಿಯನ್ನು ತಿಳಿಯುವದೇ ಇಲ್ಲ ಹಾಗೂ-

**ಆತ್ಮನಿಷ್ಠಂ ಹರಿಂ ಜಾನನ್ ಮುಚ್ಯತೇ ನಾತ್ರ ಸಂಶಯಃ ॥**

ಉಕ್ತಿಯಂತೆ ಜೀವನು ತನ್ನ ಜೊತೆಯಲ್ಲಿದ್ದು ಅನಿಮಿತ್ತೋಪಕಾರಿ ಎನಿಸಿರುವ ಶ್ರೀಹರಿಯನ್ನು ತಿಳಿದದ್ದಾದರೆ ಅವನು ಶ್ರೀಹರಿಯ ಅನುಗ್ರಹದಿಂದ ಮುಕ್ತ-ನಾಗುವುದರಲ್ಲಿ ಸಂದೇಹವಿಲ್ಲ.

ಕಾರಣ ಪ್ರತಿಯೊಬ್ಬ ಜೀವನು ತನ್ನ ಜೊತೆಗಿರುವ ಭಗವಂತನನ್ನು ತಿಳಿಯಲು ಪ್ರಯತ್ನಿಸಿ ಅವನಲ್ಲಿ ಭಕ್ತಿಮಾಡಿ ಅವನ ಅನುಗ್ರಹವನ್ನು ಸಂಪಾದಿಬೇಕು. ಅದುವೇ ಜೀವನದ ಸಾರ್ಥಕ್ಯವೆಂದು ತಿಳಿಯಬೇಕು.



# ಜೀವ ಬೇರೆ, ಬ್ರಹ್ಮಬೇರೆ ತಿಳಿದಿರಬೇಕು.

ಮುಕ್ತಿಯಲ್ಲಿ ಜೀವನು ಬ್ರಹ್ಮನನ್ನು ಹೊಂದಿ ಬ್ರಹ್ಮನೇ ಆಗುತ್ತಾನೆಂದು ಕೆಲವರು ಹೇಳುತ್ತಾರೆ. ಶಾಸ್ತ್ರಕಾರರು ಇದನ್ನು ಸೋದಾಹರಣ ಪೂರ್ವಕವಾಗಿ ನಿರಾಕರಿಸುತ್ತಾರೆ.

ಒಂದು ಪಾತ್ರೆಯಲ್ಲಿ ಶುದ್ಧವಾದ ನೀರಿದೆಯೆಂದು ತಿಳಿಯೋಣ ಇನ್ನೊಂದು ಪಾತ್ರೆಯಲ್ಲಿರುವ ಶುದ್ಧವಾದ ನೀರನ್ನು ಅದಕ್ಕೆ ಸೇರಿಸಿದರೆ, ಸೇರಿಸಿದ ನೀರು ಮೊದಲಿನ ನೀರಿನಂತೆ ಆಗುತ್ತದೆ. ಎರಡೂ ನೀರುಗಳು ಒಂದಾಗುವದಿಲ್ಲ, ಹಾಗೆ ನೀರುಗಳು ಒಂದಾಗಿದ್ದೇ ಆದರೆ ನೀರಿನಲ್ಲಿ ವೃದ್ಧಿಯು ಕಾಣಿಸುತ್ತಿರಲಿಲ್ಲ. ನೀರಲ್ಲಿ ವೃದ್ಧಿಯು ಕಂಡಿದೆಯಾದ್ದರಿಂದ ಆ ನೀರುಗಳು ಒಂದಾಗಿಲ್ಲ. ಹಾಗೆಯೇ ಚತುರ್ಮುಖಬ್ರಹ್ಮನು ಮುಕ್ತಿಯಲ್ಲಿ ಭಗವಂತನಂತೆ (ಬ್ರಹ್ಮನಂತೆ) ಆಗುತ್ತಾನೆ. ಅವನ ಸಾರೂಪ್ಯವನ್ನು ಹೊಂದುತ್ತಾನೆ. ಸದೃಶರೂಪಿಯಾಗುತ್ತಾನೆ. ಬ್ರಹ್ಮನೇ ಆಗುವದಿಲ್ಲ. ಎಲ್ಲ ಜ್ಞಾನಿ ಜೀವರಿಗೆ ಸ್ವಾಮಿಯಾಗಿ ಅವರನ್ನು ಭಗವಂತನ ಬಳಿಗೆ ಕರೆದೊಯ್ಯುವ ಚತುರ್ಮುಖ ಬ್ರಹ್ಮನೇ ಪರಬ್ರಹ್ಮನಲ್ಲಿ ಐಕ್ಯಹೊಂದುವುದಿಲ್ಲವೆಂದಮೇಲೆ ಉಳಿದ ಜೀವರು ಮುಕ್ತಿಯಲ್ಲಿ ಭಗವಂತನ ಐಕ್ಯವನ್ನು ಹೊಂದುವುದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.[1]

ಭೇದವೆನ್ನುವದು ವ್ಯಾವಹಾರಿಕವಲ್ಲ. ಅದು ಸತ್ಯ, ಯಾಕೆಂದರೆ ಮುಕ್ತಿಯ ನಂತರವೂ ಭೇದವಿರುವುದು ಅನೇಕ ಶ್ರುತಿ ಸ್ಮೃತಿ ವಚನಗಳಿಂದ ಸ್ಪಷ್ಟವಾಗುತ್ತದೆ.

ಭೇದಶ್ರುತಿಗಳು ಹೇಳುವ ಸತ್ಯತ್ವವು ವ್ಯಾವಹಾರಿಕ ಸತ್ಯತ್ವವೆಂಬುದು ಸರಿಯಲ್ಲ. ಯಾಕೆಂದರೆ ಯಾರು ಹೃದಯ ಗುಹೆಯಲ್ಲಿಯೂ, ಪರಮ ವ್ಯೋಮದಲ್ಲಿಯೂ ಇರುವವನನ್ನು ತಿಳಿದುಕೊಳ್ಳುವನೋ, ಅವನು ಸರ್ವಜ್ಞನಾದ ಭಗವಂತನೊಡನೆ ಇದ್ದು ಎಲ್ಲ ಭೋಗಗಳನ್ನು ಭೋಗಿಸುವನು. ಆನಂದಮಯನಾದ ಭಗವಂತನ ಸಮೀಪಕ್ಕೆ ಹೋಗಿ, ಆ ಲೋಕಗಳಲ್ಲಿ ಸಂಚರಿಸುತ್ತ, ಯಥೇಚ್ಛಿತವಾದ ರೂಪವುಳ್ಳವನಾಗಿ, ಯಥೇಚ್ಛಿತ ಭೋಗಗಳನ್ನು ಪಡೆಯುತ್ತ ಸಾಮಗಾಯನವನ್ನು ಮಾಡುತ್ತಿರುವನು.[2]

---

1. ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತಃ ಆತ್ಮಾ ಭವತಿ ಗೌತಮ ॥ ಕಾಠಕೋಪನಿಷತ್ತು (2-1-15)

2. ಯೋ ವೇದ ನಿಹಿತಂ ಗುಹಾಯಾಂ ಪರಮೇವ್ಯೋಮನ್ ।
ಸೋऽಶ್ನುತೇ ಸರ್ವಾನ್ ಕಾಮಾನ್ ಸಹಬ್ರಹ್ಮಣಾ ವಿಪಶ್ಚಿತಾ ॥
ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ, ಇಮಾನ್ ಲೋಕಾನ್ ।
ಕಾಮಾನ್ನೀ ಕಾಮರೂಪೀ ಅನುಸಂಚರನ್ ಏತತ್ ಸಾಮಗಾಯನ್ನಾಸ್ತೇ ॥ ತೈತ್ತ.ಉ.

ಮುಕ್ತಿಯಲ್ಲಿ ಜ್ಞಾನಿಯಾದ ಜೀವನು ಅನಿಷ್ಟ ಪುಣ್ಯ ಮತ್ತು ಪಾಪಗಳನ್ನು ಕಳೆದುಕೊಂಡು ನಿರ್ಲಿಪ್ತನಾಗಿ ಭಗವಂತನೊಡನೆ ನಿರ್ದುಃಖತ್ವಾದಿ ರೂಪ ಸಾದೃಶ್ಯವನ್ನು ಪಡೆಯುತ್ತಾನೆ.[3]

ಜೀವರು ನನ್ನಿಂದ ಉಪದಿಷ್ಟವಾದ ತತ್ತ್ವಜ್ಞಾನವನ್ನು ಆಶ್ರಯಿಸಿ ನನ್ನ ಸಾಧರ್ಮ್ಯ-ವನ್ನು (ಸಾರೂಪ್ಯ ಮುಕ್ತಿಯನ್ನು) ಹೊಂದಿದವರಾಗಿ ಸೃಷ್ಟಿಕಾಲದಲ್ಲಿ ಹುಟ್ಟುವದಿಲ್ಲ, ಪ್ರಲಯಕಾಲದಲ್ಲಿ ದೇಹ ನಾಶದಿಂದ ವ್ಯಥೆಯನ್ನು ಹೊಂದುವುದಿಲ್ಲ.[4]

ಈ ಶ್ಲೋಕದಲ್ಲಿ ಶ್ರೀಕೃಷ್ಣನು "ಜೀವರು ನನ್ನ ಸಮಾನಧರ್ಮವನ್ನು ಹೊಂದಿದವರಾಗಿ ಎಂದು ಹೇಳಿರುವುದರಿಂದ ಮುಕ್ತಿಯಲ್ಲಿ ಭೇದವು ಸಿದ್ಧವಾಗುತ್ತದೆ.

ಇನ್ನು"ಪೂತಾ ಮದ್ಭಾವಮಾಗತಾಃ" (ಗೀತಾ 4-10) ಎಂದಾಗಿ ಗೀತೆಯಲ್ಲಿ ಹೇಳಿರುವುದರಿಂದ ಜೀವ ಬ್ರಹ್ಮರಿಗೆ ಐಕ್ಯವನ್ನು ಏಕೆ ಹೇಳಬಾರದು? ಎಂದರೆ ಉತ್ತರ ಹೀಗಿದೆ.

ಇಲ್ಲಿ ಮಮ ಭಾವಃ ಮದ್ಭಾವಃ ಎಂದು ವಿಗ್ರಹ ಮಾಡದೇ ಮಯಿಭಾವಃ (ಸ್ಥಿತಿ) ಮದ್ಭಾವಃ ಎಂದು ವಿಗ್ರಹ ಮಾಡಬೇಕು. ಭಗವಂತನಲ್ಲಿ ಪ್ರವೇಶವೇ ಮುಕ್ತಿಯು ಹೊರತು ಬ್ರಹ್ಮೈಕ್ಯವು ಮುಕ್ತಿಯಲ್ಲವೆಂದು "ವಿಶತೇ ತದನಂತರಂ" (18-55) ಹಾಗೂ ವಿಶಂತಿ ಯದ್ಯತಯೋ ವೀತರಾಗಾಃ (8-11), ಕಾಮಾದಿ ರಹಿತರಾದ ಜ್ಞಾನಿ ಜೀವರು ಯಾರಲ್ಲಿ ಪ್ರವೇಶಿಸುವರೋ ಇತ್ಯಾದಿ ಶ್ರೀಕೃಷ್ಣನ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಹಾಗಾಗಿ ಜೀವಬ್ರಹ್ಮರಿಗೆ ಐಕ್ಯವಿಲ್ಲವೆಂದು ತಿಳಿಯಬೇಕು.

ವಿರುದ್ಧ ಧರ್ಮ (ಲಕ್ಷಣ)ಗಳುಳ್ಳ ಜೀವ ಈಶರಿಗೆ ಐಕ್ಯವು ಹೇಗೆ ಸಂಭವಿಸುತ್ತದೆ? ಅವರು ವಿರುದ್ಧ ಧರ್ಮಗಳಿಂದ ಯುಕ್ತರಾದ್ದರಿಂದ ಜೀವ ಈಶ್ವರರು ಅಗ್ನಿ ಹಿಮ-ಗಳಂತೆ ಪರಸ್ಪರ ವಿಲಕ್ಷಣರಾಗಿದ್ದಾರೆ, ಎಂಬುದಾಗಿ ಸರ್ವಸಿದ್ಧಾಂತಸಾರಸಂಗ್ರಹದಲ್ಲಿ ನಿರೂಪಿಸಿದ್ದಾರೆ.[5]

---

3. ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥
ಅಥರ್ವಣ ಶ್ರುತಿ

4. ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ಗೀತಾ (14-2)

5. ಕಥಮೇಕತ್ವಮನಯೋಃ ಘಟತೇ ವಿಪರೀತಯೋಃ ।
ವಿರುದ್ಧ ಧರ್ಮಾಕ್ರಾಂತತ್ವಾತ್ ಪರಸ್ಪರ ವಿಲಕ್ಷಣೌ ।
ಜೀವೇಶೌ ವಹ್ನಿತುಹಿನಾವಿವ ಶಬ್ದಾರ್ಥೋಽಪಿಚ ॥ ಸರ್ವಸಿದ್ಧಾಂತ ಸಾರಸಂಗ್ರಹ

1. ಓಂ ಸ್ಥಿತ್ಯದನಾಭ್ಯಾಂ ಚ ಓಂ ॥ (1-3-7)
2. ಓಂ ಭೇದವ್ಯಪದೇಶಾತ್ ಓಂ ॥ (1-3-5)
3. ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ (1-2-8)
4. ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ (2-1-4)

ಈ ಬ್ರಹ್ಮಸೂತ್ರಗಳಲ್ಲಿ ಜೀವ ಈಶರ ಭೇದವನ್ನು ಪ್ರತಿಪಾದಿಸಿದ್ದಾರೆ.

ಜೀವರಿಗೆ ಮತ್ತು ವಿಷ್ಣುವಿಗೆ ಇರುವ ಭೇದವನ್ನು ಯಾವನು ತಿಳಿಯುವುದಿಲ್ಲವೋ ಅಭೇದವನ್ನು ತಿಳಿಯುವನೋ ಹಾಗೆಯೇ ಅಭೇದ ಮಾರ್ಗಾವಲಂಬಿಗಳನ್ನು ಯಾವನು ಅನುಸರಿಸಿಕೊಂಡಿರುವನೋ ಅಂಥವನಿಗೆ ಯಥಾರ್ಥಜ್ಞಾನವು ಹುಟ್ಟುವದೇ ಇಲ್ಲ.[6]

ಜೀವ ಈಶ್ವರರ ಭೇದದ ಅಜ್ಞಾನದಿಂದ ಸಂಸಾರವೆಂದೂ, ಜೀವ ಈಶ್ವರರ ಅಭೇದ ನಿಶ್ಚಯದಿಂದ ತಮಸ್ಸೆಂದು ತಿಳಿದುಬರುತ್ತದೆ.[7]

ಈ ಎಲ್ಲ ಕಾರಣಗಳಿಂದ ಜೀವ ಬೇರೆ, ಬ್ರಹ್ಮ ಬೇರೆ ತಿಳಿದಿರಬೇಕು – ಇದು ಅತೀ ಅವಶ್ಯವಾಗಿದೆ.



6. ಜೀವಾನಾಂ ಚೈವ ವಿಷ್ಣೋಶ್ಚ ಯೋ ನ ವೇತ್ತಿ ಭಿದಾಂ ಪುಮಾನ್ ।
ತದನುವ್ರತಾಶ್ಚ ಯೇ ಕೇಚಿತ್ತೇಷಾಂ ಜ್ಞಾನಂ ನ ಜಾಯತೇ ॥ ಬ್ರಹ್ಮವೈವರ್ತಪುರಾಣ

7. ಅದೃಷ್ಟೇ ಜೀವ ಪರಯೋಃ ಭೇದಸ್ಯ ಆಪ್ನೋತಿ ಸಂಸೃತಿಂ ।
ಅಭೇದ ನಿಶ್ಚಯಾದ್ಯಾತಿ ತಮಃ ನಾಸ್ತ್ಯತ್ರ ಸಂಶಯಃ ॥

# ಭಗವಂತನಲ್ಲಿ ಜೀವನ ಪ್ರಾರ್ಥನೆ ಏನಿರಬೇಕು?

ಜೀವೋತ್ತಮರಾದ ಬ್ರಹ್ಮದೇವರು ತಾವು ಸ್ವತಃ ಪಾಪ, ಅಜ್ಞಾನಾದಿಗಳಿಂದ ರಹಿತರಾಗಿದ್ದರೂ, ನಮ್ಮಂತಹ ಜೀವರು ಭಗವಂತನಲ್ಲಿ ಈ ಪಾಪ, ಅಜ್ಞಾನಾದಿಗಳನ್ನು ಪರಿಹರಿಸಿಕೊಳ್ಳುವ ಪ್ರಾರ್ಥನೆಯ ಕ್ರಮವನ್ನು ತಿಳಿಸಿಕೊಟ್ಟಿದ್ದಾರೆ. ಪಂಚರಾತ್ರಾಗಮದಲ್ಲಿ ಉಕ್ತವಾದ ಈ ಪ್ರಾರ್ಥನೆಯ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸಲಾಗಿದೆ.

ವಿಷಯ ಪದಾರ್ಥಗಳ ಸಾಗರದಲ್ಲಿ ಮುಳುಗಿದ ನನ್ನನ್ನು, ಹೇಭಗವಂತ! ನೀನೇ ಉದ್ಧರಿಸಬೇಕು. ಏಕೆಂದರೆ ನೀನು ಎನ್ನ ತಂದೆ, ತಾಯಿ, ಪ್ರತ್ಯುಪಕಾರ ಬಯಸದೇ ಉಪಕರಿಸುವವ, ಬಂಧು, ಅಣ್ಣ ಹೀಗೆ ನೀನೇ ಸರ್ವಸ್ವವೂ ಆಗಿರುವಿ. ವಿದ್ಯೆ, ಸಂಪತ್ತು ಇಷ್ಟಾರ್ಥಸಿದ್ಧಿ ಎಲ್ಲವೂ ನಿನ್ನ ಅಧೀನವಾಗಿವೆ. ನಿನ್ನ ಒಲುಮೆ ಇಲ್ಲದ ನನ್ನ ಅಸ್ತಿತ್ವವನ್ನು ಕಲ್ಪಿಸಿಕೊಳ್ಳಲು ಕೂಡ ಸಾಧ್ಯವಿಲ್ಲ.[1]

ಯಾವ ಕುಲದಲ್ಲೇ ಜನಿಸಲಿ, ಯಾವ ಸ್ಥಳದಲ್ಲಿಯೇ ವಾಸಿಸಲಿ, ಕೇವಲ ನಿನ್ನ ದಾಸ್ಯದಲ್ಲಿ ನನ್ನ ಮನಸ್ಸು ನೆಟ್ಟಿರಲಿ.[2]

ಜಗತ್ತಿನ ಸ್ವಾಮಿಯೇ! ಭಕ್ತವತ್ಸಲನಾದ ನೀನು ಕೃಪೆಯಿಂದ ನನ್ನನ್ನು ರಕ್ಷಿಸು. ನನಗೆ ನಿನ್ನನ್ನು ಬಿಟ್ಟು ಬೇರೆ ಒಡೆಯರಿಲ್ಲ, ನಾನು ಪುಣ್ಯಕಾರ್ಯಗಳನ್ನು ಮಾಡಿದವನಲ್ಲ, ಪುರುಷಾರ್ಥ ಸಾಧನೆಗೆ ತೊಡಗಿಲ್ಲ, ಕಡುಬಡವನು. ನನ್ನ ಮೇಲೆ ನಿನ್ನ ಕೃಪೆ ಇರಲಿ.[3]

ನಾನು ಕೃತಘ್ನ, ಪಾಪಿಷ್ಠ, ಕ್ರೂರಿ, ಮೋಸಗಾರ, ನಿಷ್ಠುರಭಾಷಿ, ಮೂರ್ಖ-ನಾಗಿರುವೆ. ಕರುಣಾಸಾಗರನಾದ ನೀನು, ಸಂಸಾರ ಸಾಗರದಲ್ಲಿ ಮುಳುಗಿದ ದೀನನಾದ ನನ್ನನ್ನು ಕರುಣೆಯಿಂದ ರಕ್ಷಿಸು.[4]

1. ವಿಷಯಾರ್ಣವಮಗ್ನಂ ಮಾಮುದ್ಧರ್ತುಂ ತ್ವಮಿಹಾರ್ಹಸಿ ।
ಪಿತಾಮಾತಾ ಸುಹೃದ್ಬಂಧುರ್ಭ್ರಾತಾ ಪುತ್ರಸ್ತ್ವಮೇವ ಮೇ ।
ವಿದ್ಯಾ ಧನಂ ಚ ಕಾಮಶ್ಚ ನಾನ್ಯತ್ ಕಿಂಚಿತ್ತ್ವಯಾ ವಿನಾ ॥ (1-6)
2. ಯತ್ರ ಕುತ್ರ ಕುಲೇ ವಾಸೋ ಯೇಷುಕೇಷು ಭವೋಽಸ್ತು ಮೇ ।
ತವ ದಾಸ್ಯೈಕ ಭಾವೇಸ್ಯಾತ್ಸದಾ ಸರ್ವತ್ರ ಮೇ ರತಿಃ ॥ (1-7)
3. ಪಾಹಿ ಪಾಹಿ ಜಗನ್ನಾಥ ಕೃಪಯಾ ಭಕ್ತವತ್ಸಲ ।
ಅನಾಥೋಽಹಮಧನ್ಯೋಽಹಮಕೃತಾರ್ಥೋ ಹ್ಯಕಿಂಚನಃ ॥ (1-9)
4. ನೃಶಂಸಃ ಪಾಪಕೃತ್ ಕ್ರೂರೋ ವಂಚಕೋ ನಿಷ್ಠುರಃ ಶಠಃ ।
ಭವಾರ್ಣವನಿಮಗ್ನಂ ಮಾಮನನ್ಯಕರುಣೋದಧೇ ।
ಕರುಣಾಪೂರ್ಣದೃಷ್ಟಿಭ್ಯಾಂ ದೀನಂ ಮಾಮವಲೋಕಯ ॥ (1-10)

ನಾನು ನಿನ್ನವನು, ನಿನ್ನ ಪಾದಗಳಿಗೆ ಶರಣಾಗತನಾಗಿರುವೆ. ಮನೋವಾಕ್ಕಾಯ-ಗಳಿಂದ ಮತ್ತೆ ಮತ್ತೆ ಪಾಪಗಳು ನನ್ನಿಂದ ಮಾಡಲ್ಪಡುತ್ತವೆ. ನಿನ್ನ ಕರುಣೆಯೊಂದೇ ನಿನ್ನ ಬಳಿಗೆ ಬರಲು ಎನಗಿರುವ ಉಪಾಯವು.[5]

ಈ ಪ್ರಪಂಚದ ಹುಟ್ಟು, ರಕ್ಷಣೆ, ವಿನಾಶಗಳಿಗೆ ಕಾರಣನಾದ ಪುರುಷೋತ್ತಮನಾದ ಶ್ರೀಹರಿಯೇ, ನೀನು ಕೇವಲ ಭಕ್ತಿಯಿಂದ ಒಲಿಯತಕ್ಕವನು. ಹೇ ಪುಂಡರೀಕಾಕ್ಷ! ಸಂಸಾರದಲ್ಲಿ ನೊಂದು ನಿನಗೆ ಶರಣಾಗತನಾಗಿರುವೆ. ಅಲ್ಪನಾದ ನನಗೆ ಬೇರೆಯಾರೂ ರಕ್ಷಕರಿಲ್ಲ. ನಿನ್ನವನೆಂದು ನನ್ನನ್ನು ಸ್ವೀಕರಿಸಿ ಅನುಗ್ರಹಿಸು.[6]

ನಿನ್ನ ಸೇವಕ ವರ್ಗದಲ್ಲಿ ನನ್ನನ್ನು ಒಬ್ಬನನ್ನಾಗಿ ಸ್ವೀಕರಿಸು. ನಿನ್ನ ಸೇವೆಗೆ ನಾನು ಸದಾ ಸಿದ್ಧನಾಗಿರುವೆ. ದೇವತೆಗಳು ಹಾಗೂ ಸಾತ್ವಿಕರಾದ ಅಸುರರಿಂದ ಆರಾಧ್ಯವಾದ ನಿನ್ನ ಪಾವನವಾದ ಪಾದಕಮಲಗಳನ್ನು ನನ್ನ ತಲೆಯಮೇಲೆ ಇರಿಸು.[7]

ನಾನು ಬಯಸುವದು ಕೇವಲ ನಿನ್ನ ಅನುಗ್ರಹ ಮಾತ್ರ. ಬ್ರಹ್ಮಾಂಡದ ಹೊರಗಿರುವ ನೀರು, ಅನ್ನ, ವಾಯು, ಆಕಾಶ ಇತ್ಯಾದಿ ನವಾವರಣಗಳ ಆಚೆಗೂ ಇರುವ ಶ್ರೀಹರಿಯೇ ನಾನು ನಿನ್ನ ದಾಸನಾಗಿರುವೆ. ಹೇ ಸರ್ವೋತ್ತಮ ಶ್ರೀಹರಿಯೇ ಮತ್ತೆ ಮತ್ತೆ ನಾನು ನಿನ್ನ ದಾಸನೆಂದು ನಿವೇದಿಸಿಕೊಳ್ಳುತ್ತೇನೆ.[8]

ಭಕ್ತಿ ನೈವೇದ್ಯ ಪದಾರ್ಥಗಳಿಲ್ಲದ, ಮಂತ್ರ ತಂತ್ರಗಳಿಲ್ಲದ, ನಾನು ಮಾಡಿದ ಪೂಜೆಯನ್ನು ಸ್ವೀಕರಿಸು. ನನ್ನ ಅಪರಾಧಗಳನ್ನು ಮನ್ನಿಸು ನಿನ್ನ ದರ್ಶನ ನೀಡು.[9]

---

5. ತ್ವದಗ್ರೇ ಪತಿತಂ ತ್ಯಕ್ತುಂ ತಾವಕಂ ನಾರ್ಹಸಿ ಪ್ರಭೋ ।
ಮಯಾ ಕೃತಾನಿ ಪಾಪಾನಿ ತ್ರಿವಿಧಾನಿ ಪುನಃ ಪುನಃ ।
ತ್ವತ್ಪಾದಪಂಕಜಂ ಪ್ರಾಪ್ತುಂ ನಾನ್ಯತ್ ತ್ವತ್ಕರುಣಾಂ ವಿನಾ ॥ (1-11)

6. ಭಕ್ತ್ಯೈಕಲಭ್ಯಃ ಪುರುಷೋತ್ತಮೋ ಹಿ ಜಗತ್ ಪ್ರಸೂತಿ ಸ್ಥಿತಿನಾಶ ಹೇತುಃ ।
ಅಕಿಂಚನಂ ನಾನ್ಯಗತಿಂ ಶರಣ್ಯಂ ಗೃಹಾಣ ಮಾಂ ಕ್ಲೇಶಿನಮಂಬುಜಾಕ್ಷ ॥ (1-13)

7. ಕಾಮಯೇ ತಾವಕತ್ವೇನ ಪರಿಚರ್ಯಾಸು ವರ್ತನಮ್ ।
ನಿತ್ಯಂ ಕಿಂಕರ ಭಾವೇನ ಪರಿಗೃಹ್ಣೀಷ್ವ ಮಾಂ ವಿಭೋ ॥ (1-15)
ಸುರಾಸುರೈರ್ವಂದ್ಯಮಾನಮೃಷಿಭಿರ್ವಂದಿತಂ ಸದಾ ।
ಮೂರ್ಧಾನಂ ಮಾಮಕಂ ದೇವ ತಾವಕಂ ಮಂಡಯಿಷ್ಯತಿ ॥ (1-24)

8. ಇಚ್ಛಾಮ್ಯಹಂ ಮಹಾಭಾಗ ಕಾರುಣ್ಯಂ ತವ ಸುವ್ರತ ।
ಸಕಲಾವರಣಾತೀತ ಕಿಂಕರೋಽಸ್ಮಿ ತವಾನಘ ॥ (1-34)

9. ಭೋಗಹೀನಂ ಕ್ರಿಯಾಹೀನಂ ಮಂತ್ರಹೀನಮಭಕ್ತಿಕಮ್ ।
ತತ್ಸರ್ವಂ ಕ್ಷಮ್ಯತಾಂ ದೇವ ದೀನಂ ಮಾಮಾತ್ಮಸಾತ್ ಕುರು ॥ (1-35)

ಹುಟ್ಟು, ಮರಣ, ಮುಪ್ಪು, ರೋಗ, ದುಃಖಾನುಭವಗಳಿಂದ ಜರ್ಜರಿತನಾದ ನನ್ನನ್ನು ಕರುಣಾದೃಷ್ಟಿಯಿಂದ ನೋಡು. ನನ್ನ ಮನಸ್ಸು ಭೋಗ ವಸ್ತುಗಳ ಬಳಿಗೆ ಚಲಿಸುತ್ತದೆ. ನನ್ನ ನಾಲಿಗೆ ಸುಳ್ಳು ಮತ್ತು ಕಟುವಾದ ಮಾತನಾಡುವುದರಿಂದ ಮಲಿನವಾಗಿದೆ, ಹೀಗೆ ಜ್ಞಾನ ಸಾಧನಗಳಾದ ಇಂದ್ರಿಯಗಳ ಮೇಲೆ ನಿಯಂತ್ರಣವಿಲ್ಲದ ನಾನು ಏನು ಸಾಧನೆ ಮಾಡಬಲ್ಲೆ? ಲಕ್ಷ್ಮೀಪತಿಯೇ! ಸಂಸಾರ ಸಾಗರದಲ್ಲಿ ಮುಳುಗಿದ ನನ್ನನ್ನು ರಕ್ಷಿಸು.[10]

ಕರ್ಮ, ಮನಸ್ಸು, ವಾಗಿಂದ್ರಿಯ ಮೊದಲಾದವುಗಳಿಂದ ನಾನು ಯಾವ ಯಾವ ಕಾರ್ಯಗಳನ್ನು ಮಾಡುವೆನೋ ಅವೆಲ್ಲವೂ ಪ್ರತಿಜನ್ಮದಲ್ಲಿ ಕೇಶವನ ಆರಾಧನಾರೂಪವಾಗಿರಲಿ.[11]

ಬುದ್ಧಿಪೂರ್ವಕವಾಗಲೀ, ಅಬುದ್ಧಿಪೂರ್ವಕವಾಗಲೀ ನಾನುಮಾಡಿದ ಪಾಪಗಳನ್ನು ನೀನು ಕ್ಷಮಿಸು. ನನ್ನನ್ನು ದಾಸನನ್ನಾಗಿ ಸ್ವೀಕರಿಸು. ಎಲ್ಲ ದೇಶಕಾಲಗಳಲ್ಲಿ ಎಚ್ಚರ, ಕನಸು, ನಿದ್ರೆ, ಜೀವನ್ಮುಕ್ತಿ ಅವಸ್ಥೆ ಹಾಗೂ ಮುಕ್ತಿಯಲ್ಲೂ ನಾನು ನಿನ್ನ ದಾಸನಾಗಿರುವೆ - ಹೃಷೀಕೇಶನೇ! ನಾನು ನಿನ್ನದಾಸನೆಂಬುದಾಗಿ ಮತ್ತೆ ಮತ್ತೆ ನಿವೇದಿಸುತ್ತೇನೆ.[12]

ಷಡ್ಗುಣೈಶ್ವರ್ಯ ಪೂರ್ಣನಾದ ಶ್ರೀಹರಿಯೇ! ನನಗೆ ರಕ್ಷಕರಾರೂ ಇಲ್ಲ ಸ್ವಾಭಾವಿಕವಾಗಿ ನೀನು ದಯಾಳುವಾಗಿದ್ದೀ. ಸಂಸಾರಸಾಗರದಲ್ಲಿ ಮುಳುಗಿರುವ,

---

10. ಜನ್ಮಮೃತ್ಯುಜರಾವ್ಯಾಧಿ ದುಃಖಸಂತಪ್ತ ದೇಹಿನಮ್ ।
ಪಾಲಯಾಶು ದೃಶಾ ದೇವ ತವಕಾರುಣ್ಯಗರ್ಭಯಾ ॥ (2-7)
ಮನೋ ಮೇ ಪುಂಡರೀಕಾಕ್ಷ ವಿಷಯಾನೇವ ಧಾವತಿ ।
ವಾಣೀ ಮಮ ಹೃಷೀಕೇಶ ಮಿಥ್ಯಾಪಾರುಷ್ಯದೂಷಿತಾ ॥ (2-9)
ಏವಂ ಸಾಧನ ಹೀನೋಽಹಂ ಕಿಂ ಕರಿಷ್ಯಾಮಿ ಕೇಶವ ।
ರಕ್ಷ ಮಾಂ ಕೃಪಯಾ ಕೃಷ್ಣ ಭವಾಬ್ಧೌ ಪತಿತಂ ಸದಾ ॥ (2-10)

11. ಕರ್ಮಣಾ ಮನಸಾ ವಾಚಾ ಯಾ ಚೇಷ್ಟಾ ಮಮ ನಿತ್ಯಶಃ ।
ಕೇಶವಾರಾಧನೇ ಸಾ ಸ್ಯಾತ್ ಜನ್ಮ ಜನ್ಮಾಂತರೇಷ್ವಪಿ ॥ (2-16)

12. ಅಜ್ಞಾನಾದಥವಾ ಜ್ಞಾನಾದಶುಭಂ ಯತ್ಕೃತಂ ಮಯಾ ।
ಕ್ಷಂತುಮರ್ಹಸಿ ದೇವೇಶ ದಾಸ್ಯೇನ ಚ ಗೃಹಾಣ ಮಾಮ್ ॥ (4.14)
ಸರ್ವೇಷು ದೇಶಕಾಲೇಷು ಸರ್ವಾವಸ್ಥಾಸು ಚಾಚ್ಯುತ ।
ಕಿಂಕರೋಽಸ್ಮಿ ಹೃಷೀಕೇಶ ಭೂಯೋ ಭೂಯೋಽಸ್ಮಿ ಕಿಂಕರಃ ॥ (4-15)

ಅನಂತ ದುಃಖಗಳಿಂದ ಬೆಂದುಹೋದ ನನ್ನನ್ನು ಕೇವಲ ಕರುಣೆಯಿಂದ ನೀನು ಉದ್ಧರಿಸು.[13]

ಅನಂತಅಪರಾಧಗಳ ಆಶ್ರಯನಾದ, ಭಯಂಕರವಾದ ಸಂಸಾರಸಾಗರದಲ್ಲಿ ಮುಳುಗಿದ, ಬೇರೆ ಯಾರೂ ರಕ್ಷರಿಲ್ಲದ, ನಿನಗೆ ಶರಣಾಗತನಾದ, ನನಗೆ ಕೇವಲ ಕೃಪೆಯಿಂದ ನಿನ್ನ ದರ್ಶನವನ್ನು ನೀಡು. ಎಲ್ಲ ಜನ್ಮಗಳಲ್ಲೂ ನಾನು ನಿನ್ನ ದಾಸನೇ. ಶಿಷ್ಯನೂ, ಮಗನೂ ಆಗಿರುವೆ. ನೀನು ನಮ್ಮ ಒಡೆಯ. ಗುರು, ತಾಯಿ, ತಂದೆ, ಸರ್ವಸ್ವವೂ ಆಗಿರುವಿ.[14]

ನಾನು ಹಿತವನ್ನರಿಯೆ. ಕೇವಲ ನಿನ್ನನ್ನು ಆರಾಧಿಸುವೆ. ನೀನೇ ಮುಕ್ತಿ ನೀಡುವ ದೊರೆ. ಈ ನನ್ನ ನಿವೇದನೆಯನ್ನು ಆಲಿಸಿ ನನ್ನನ್ನು ಉದ್ಧರಿಸು.[15]

ನನಗೆ ಸಮಾನನಾದ ಪಾಪಿ ಇಲ್ಲ, ನಿನಗೆ ಸಮಾನನಾದ ದಯಾಳುವಿಲ್ಲ, ಗರುಡ ಧ್ವಜನಾದ, ಜಗತ್ ಸ್ವಾಮಿಯಾದ ನೀನು ಶರಣಾಗತನಾದ ನನ್ನನ್ನು ರಕ್ಷಿಸು.[16]



---

13. ಸ ತ್ವಂ ಪ್ರಸೀದ ಭಗವನ್ ಕುರು ಮಯ್ಯನಾಥೇ
ವಿಷ್ಣೋ ಕೃಪಾಂ ಪರಮಕಾರುಣಿಕಃ ಕಿಲ ತ್ವಮ್ ।
ಸಂಸಾರಸಾಗರ ನಿಮಗ್ನಮನಂತ ದೀನ
ಮುದ್ಧರ್ತುಮರ್ಹಸಿ ಹರೇ ಕರುಣಾವಶೇನ ॥ (4-18)

14. ಅಪರಾಧಸಹಸ್ರಭಾಜನಂ ಪತಿತಂ ಭೀಮಭವಾರ್ಣವೋದರೇ ।
ಅಗತಿಂ ಶರಣಾಗತಂ ಹರೇ ಕೃಪಯಾ ಕೇವಲಮಾತ್ಮಸಾತ್ ಕುರು ॥ (5-20)
ಜನ್ಮ ಪ್ರಭೃತಿ ದಾಸೋಽಸ್ಮಿ ಶಿಷ್ಯೋಽಸ್ಮಿ ತನಯೋಽಸ್ಮಿ ತೇ ।
ತ್ವಂ ಚ ಸ್ವಾಮೀ ಗುರುರ್ಮಾತಾ ಪಿತಾಚ ಮಮ ಮಾಧವ ॥ (5-21)

15. ನಾಹಂ ಹಿತಂ ಪ್ರಜಾನಾಮಿ ತ್ವಾಂ ಭಜಾಮ್ಯೇವ ಕೇವಲಮ್ ।
ಬುದ್ಧ್ವೈವಂ ಮಮಗೋವಿಂದ ಮುಕ್ತ್ಯುಪಾಯ ನಮೋಽಸ್ತುತೇ ॥ (5-22)

16. ಮಾದೃಶೋ ನ ಪರಃ ಪಾಪೀ ತ್ವಾದೃಶೋ ನ ದಯಾಪರಃ ।
ಇತಿ ಮತ್ವಾ ಜಗನ್ನಾಥ ರಕ್ಷಮಾಂ ಗರುಡಧ್ವಜ ॥ (5-25)

# ''ಜೀವ''ನು ''ನಾನು ನನ್ನದು'' ಬಿಡಬೇಕು.

ಈ ಪ್ರಪಂಚದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಸಾಮಾನ್ಯವಾಗಿ ಮಾತು ಮಾತಿಗೂ ನಾನು ಈ ಕೆಲಸ ಮಾಡಿದೆ, ಈ ವಸ್ತು ನನ್ನದು ಇತ್ಯಾದಿ ಹೇಳಿಕೊಳ್ಳುವದುಂಟು ಅಷ್ಟೇ ಏಕೆ ಸಣ್ಣ ಮಗುವು ಕೂಡ ''ಇದು ನನ್ನದು, ನಾನು ಕೊಡುವದಿಲ್ಲ''. ಎಂದೇ ಉತ್ತರಿಸುತ್ತದೆ. ಇಷ್ಟು ಸಹಜವಾಗಿ ನಾನು ನನ್ನದು ಎಂಬುದು ಹುಟ್ಟಿನಿಂದಲೇ ಜೀವನಿಗೆ ಬಂದು ಬಿಟ್ಟಿರುತ್ತದೆ. ಇದು ಜೀವರಿಗೆ ಒಳಿತನ್ನು ಮಾಡಲಾರದು.

ಜೀವನದಲ್ಲಿ ಯಾವ ಕೆಲಸವನ್ನೂ ಜೀವನು ಸ್ವತಂತ್ರನಾಗಿ ಮಾಡಲಾರ, ಜೀವನಿಗೆ ಸ್ವತಂತ್ರವಾದ ಕರ್ತೃತ್ವವು ಇಲ್ಲವೇ ಇಲ್ಲ. ಗೀತೆಯಲ್ಲಿ ಶ್ರೀಕೃಷ್ಣ ಹೇಳುತ್ತಾನೆ-

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ॥** (5-14)

ಹೀಗಿದ್ದರೂ ಪ್ರತಿಯೊಬ್ಬ ಮನುಷ್ಯನು ಈ ಕೆಲಸ ನಾನು ಮಾಡಿದೆ ಎಂದೆಲ್ಲ ಹೇಳಿಕೊಳ್ಳುತ್ತಾನೆ. ''ನಾಹಂ ಕರ್ತಾ ಹರಿಃ ಕರ್ತಾ'' ಎನ್ನುವದೇ ಇಲ್ಲ.

ಶ್ರೀಮದ್‌ಭಾಗವತಕಾರರು ''ನಾನು ನನ್ನದು'' ಎಂದು ಹೇಳುವವ ಅಜ್ಞಾನಿಯೇ ಸರಿ ಎನ್ನುತ್ತಾರೆ.

**ಭೂತೈಃ ಪಂಚಭಿರಾಬ್ಧೇ ದೇಹೇಽಸ್ಮಿನ್ ಹ್ಯಬುಧೋಽಸಕೃತ್ ।**
**ಅಹಂ ಮಮೇತ್ಯಸದ್ ಗ್ರಾಹಾಃ ಕರೋತಿ ಕುಮತಿರ್ಮತಿಮ್ ॥** (3-32-31)

ವಸ್ತುಸ್ಥಿತಿಗೆ ವಿರುದ್ಧವಾದಬುದ್ಧಿಯಿಂದ ಕೂಡಿದ ಅಜ್ಞಾನಿಯು ಪಂಚಮಹಾಭೂತಗಳಿಂದ ನಿರ್ಮಿತವಾದ ಶರೀರದಲ್ಲಿ ''ನಾನು - ನನ್ನದು'' ಎಂಬ ಅಭಿಮಾನ, ಆಗ್ರಹಗಳನ್ನು ಹೊಂದುತ್ತಾನೆ.

''ನಾನು ನನ್ನದು'' ಎಂಬ ಭಾವನೆಯಿಂದ ಕೂಡಿದ ಜೀವನು ದುಃಖ ಪರಂಪರೆಯನ್ನು ತಂದುಕೊಳ್ಳುತ್ತಾನೆ.

**''ಮಮೇತ್ಯೇವಮ್ ಅಮಂಗಲರೂಪೋ ಅಭಿಮಾನಃ ಸರ್ವಸ್ಯಾಪಿ ದುಃಖಸ್ಯ ಕಾರಣೀಭೂತಃ ॥**

ಶ್ರೀಪುರಂದರದಾಸರು ''ನಾನು, ನನ್ನದು'' ಬಿಡಬೇಕೆಂಬುದನ್ನು ಬಹಳ ಮಾರ್ಮಿಕವಾಗಿ ತಿಳಿಸಿದ್ದಾರೆ.

ನಾನುನನ್ನದು ಎಂಬುದ ಬಿಟ್ಟು। ಹೀನ ವಿಷಯಂಗಳ ಜರಿದು।
ಜ್ಞಾನಗಮ್ಯ ಕಾಯೋ ಎನಲು ಪೂರ್ಣನಿದ್ದಾನೆ।
ಪ್ರಾಣೀ ಚಿಂತ್ಯಾಕ ಮಾಡತೀದಿ ಚಿನ್ಮಯನಿದ್ದಾನೆ।

ಈ ಜೀವನದಲ್ಲಿ ಎಲ್ಲವೂ ಭಗವಂತನಿಗೆ ಸೇರಿದ್ದು ಅವನು ಕೊಟ್ಟರೆ ಕೊಟ್ಟಾಗ ಮಾತ್ರ ಅದು ನನ್ನದು ಇಲ್ಲದಿದ್ದರೆ ಇಲ್ಲ ಈ ಅನುಸಂಧಾನ ಅವಶ್ಯ. ಅಂತೆಯೇ ಶ್ರೀದಾಸರು ನಂದೇನದೋ ಇಲ್ಲಿ ನಿಂದೇ ಇದೆಲ್ಲವು । ನಂದನಂದನ ಕಂದ ಗೋವಿಂದ ॥ ಎಂದಾಗಿ ಹೇಳಿರುವುದು ಸ್ವಾರಸ್ಯಕರವಾಗಿದೆ.

ಶ್ರೀಮನ್ ಮಹಾಭಾರತಕಾರರು ''ಮಮ'' ಎರಡಕ್ಷರಗಳನ್ನು ಬಿಟ್ಟವರಿಗೆ ಸದ್ಗತಿ ನಿಶ್ಚಿತ ಎಂದಿದ್ದಾರೆ-

**ದ್ವ್ಯಕ್ಷರಸ್ತು ಭವೇನ್ಮೃತ್ಯುಃ ತ್ರ್ಯಕ್ಷರಂ ಬ್ರಹ್ಮಶಾಶ್ವತಮ್ ।**
**ಮಮೇತಿ ಚ ಭವೇನ್ಮೃತ್ಯುಃ ನ ಮಮೇತಿ ಚ ಶಾಶ್ವತಮ್ ॥**

(ಮ.ಭಾ ಶಾಂತಿಪರ್ವ 13-4)

'ಮಮ' ಎಂಬ ಎರಡಕ್ಷರಗಳು ಅಶಾಶ್ವತವಾದ ಸಂಸಾರಕ್ಕೆ ಕಾರಣ ''ನ ಮಮ''ಎಂಬ ಮೂರು ಅಕ್ಷರಗಳಿಂದ (ನನ್ನದಲ್ಲ, ಎಲ್ಲವೂ ಸ್ವಾಮಿಗೆ ಸೇರಿದ್ದು) ಶಾಶ್ವತ ಸುಖರೂಪವಾದ ಮೋಕ್ಷವು ದೊರಕುತ್ತದೆ.

ಶ್ರೀ ಶಾಂಡಿಲ್ಯತತ್ವದಲ್ಲಿ ಈ ವಿಷಯ ಕುರಿತು ಹೀಗೆ ತಿಳಿಸಿದ್ದಾರೆ.

**''ನಿತ್ಯಾನಿತ್ಯ ವಿವೇಕಜ್ಞೋ ಮಮತಾಂ ತು ಪರಿತ್ಯಜೇತ್''**

ನಾನು, ನನ್ನದು ಎಂಬ ಅಭಿಮಾನವೇ ''ಮಮತೆ'' ಎನಿಸುತ್ತದೆ. ವಿವೇಕಿಯಾದವನು ಇದನ್ನು ಬಿಟ್ಟು ಶಾಶ್ವತ ಸುಖ ಹೊಂದಬೇಕು.

ಶ್ರೀಹರಿಕಥಾಮೃತಸಾರದಲ್ಲಿ ''ನಾನು ನನ್ನದು'' ಬಿಡಬೇಕೆಂದು ಶ್ರೀಜಗನ್ನಾಥ ದಾಸರು ಸಾರಿ ಹೇಳಿದ್ದಾರೆ.

**ನಾನು ನನ್ನದು ಎಂಬ ಜಡಮತಿ**
**ಮಾನವನು ದಿನದಿನದಿ ಮಾಡುವ**
**ಸ್ನಾನ ಜಪ ದೇವಾರ್ಚನೆಯು ಮೊದಲಾದ ಕರ್ಮಗಳ ।**

**ದಾನವರು ಸೆಳೆದೊಯ್ಯುವರಲ್ಲದೇ**
**ಶ್ರೀನಿವಾಸನು ಸ್ವೀಕರಿಸ ಮ**
**ದ್ದಾನೆ ಪಕ್ವ ಕಪಿತ್ಥಫಲ ಭಕ್ಷಿಸಿದವೋಲಹುದು ॥** (ಸರ್ವಪ್ರತೀಕಸಂಧಿ 13)

ಶ್ರೀಮದ್‌ಭಾಗವತಕಾರರು ಹೀಗೆ ಎಚ್ಚರಿಸಿದ್ದಾರೆ.

**ತೇ ವೈ ವಿದಂತಿ ಅತಿತರಂತಿ ಚ ದೇವಮಾಯಾಂ**
**ನೈಷಾಂ ಮಮಾಹಮತಿಧೀಃ ಶ್ವಶೃಗಾಲಭಕ್ಷೇ ॥** (2-2-42)

ನಾಯಿ ನರಿಗಳಿಗೆ ತಿನ್ನಲರ್ಹವಾದ ಈ ದೇಹದ ವಿಷಯದಲ್ಲಿ ಯಾರಿಗೆ ನನ್ನದು, ನಾನು, ಎಂಬ ಬುದ್ಧಿ ಇದೆಯೋ ಅವರು ಭಗವಂತನನ್ನು ತಿಳಿಯಲಾರರು. ಅವನು ಹಾಕಿದ ಸಂಸಾರ ಬಂಧವನ್ನು ದಾಟಲಾರರು.

ಅಂತೆಯೇ ಶ್ರೀಭಗವದ್ಗೀತೆಯಲ್ಲಿ ಶ್ರೀಕೃಷ್ಣನು

**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ (2-71)**

ಎಂದಾಗಿ ಹೇಳಿರುವ ಮಾತು ಇಲ್ಲಿ ಗಮನಾರ್ಹವಾಗಿದೆ.



# ಜೀವನು ಸ್ವಕರ್ಮಾಚರಣೆ ಮಾಡಬೇಕು.

ನೂರುವರ್ಷ ಸಂತೋಷದಿಂದ ಇರಬಯಸುವವನು ಈ ಕರ್ಮಭೂಮಿಯಲ್ಲಿ ಸಾಧನಶರೀರದಿಂದ ಭಗವಂತನ ಪೂಜಾರೂಪವಾಗಿ ಸ್ವಕರ್ಮಗಳನ್ನು ಆಚರಿಸುತ್ತಿರಬೇಕು.[1]

ಸ್ವಸ್ವವರ್ಣಾಶ್ರಮೋಚಿತ ಕರ್ಮಾಚರಣೆಯೇ ಭಗವಂತನ ಆರಾಧನೆ ಎನಿಸುತ್ತದೆ. ಇದರಿಂದ ಜೀವನು ಸಿದ್ಧಿಯನ್ನು ಹೊಂದುತ್ತಾನೆ.[2]

ಜೀವನು ಆಚರಿಸುವ ಎಲ್ಲ ಕರ್ಮಗಳಿಗೂ ಭಗವತ್ಪ್ರಸಾದವೇ ಮುಖ್ಯ ಪ್ರಯೋಜನ ಎಲ್ಲ ಕರ್ಮಗಳನ್ನು ಮಾಡುವವನು, ಮಾಡಿಸುವವನು ಸ್ವತಂತ್ರನಾದ ಭಗವಂತನೇ ಎಂಬ ಬುದ್ಧಿಯಿಂದ ಕರ್ಮಗಳನ್ನು ಆಚರಿಸಬೇಕು.[3]

ಭಗವಂತನ ಸಮ್ಯಗ್ ಜ್ಞಾನ ಮಾಡಿಕೊಂಡು ಕರ್ಮಗಳ ಫಲದಲ್ಲಿ ಸ್ನೇಹ ಬಿಟ್ಟು ಆ ಭಗವಂತನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡಿ ಅವನಿಗೆ ಅರ್ಪಿಸುವುದೇ ಕರ್ಮ ಯೋಗವೆನಿಸುತ್ತದೆ.[4]

ಇದನ್ನೇ ಶ್ರೀಮದಾನಂದತೀರ್ಥಭಗವತ್ಪಾದರು ''ನಿಯತಂ ಕರ್ಮಕುರು'' ಎಂಬುದಾಗಿ ಹೇಳಿರುವುದು ಗಮನಾರ್ಹ.

ಜೀವನು ಮಾಡುವ ಕರ್ಮಗಳು ನಿತ್ಯ, ನೈಮಿತ್ತಿಕ, ಕಾಮ್ಯ ಎಂಬುದಾಗಿ ಮೂರು ವಿಧವಾಗಿವೆ,

1. ಸಂಧ್ಯಾವಂದನೆ ಮೊದಲಾದ ಕರ್ಮಗಳು ನಿತ್ಯಕರ್ಮಗಳೆನಿಸುತ್ತವೆ. ಇವುಗಳನ್ನು ಮಾಡದಿದ್ದರೆ (ಪ್ರತ್ಯವಾಯ) ದೋಷ ಉಂಟು-
2. ಪಿತೃಶ್ರಾದ್ಧಾದಿ ಕರ್ಮಗಳು ನೈಮಿತ್ತಿಕ ಕರ್ಮಗಳೆನಿಸುತ್ತವೆ.

---

1. ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ॥ ಈಶಾವಾಸ್ಯೋಪನಿಷತ್
2. ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ಗೀತಾ (18-46)
3. ತತ್ಕರ್ಮ ಹರಿತೋಷಂ ಯತ್ ॥ ನಾಹಂ ಕರ್ತಾ ಹರಿಃ ಕರ್ತಾ ॥
ಕರ್ತಾ ಕಾರಯಿತಾ ಪ್ರಭುಃ ॥
4. ಯೋಗಃ ಕರ್ಮಸು ಕೌಶಲಮ್ ॥ ಗೀತಾ (2-50)

3. ಯಾವುದಾದರೊಂದು ಕಾಮನೆಯಿಂದ ಮಾಡುವ ಕರ್ಮಗಳು ಕಾಮ್ಯಕರ್ಮ-ಗಳೆನಿಸುತ್ತವೆ.

ಈ ಕರ್ಮಗಳು ಮತ್ತೆ ಸಾತ್ವಿಕ, ರಾಜಸ, ತಾಮಸ ಎಂಬುದಾಗಿ ಮೂರು ವಿಧವಾಗಿವೆ.

ರಾಗ ದ್ವೇಷಗಳನ್ನು ಬಿಟ್ಟು ಫಲದ ಹಂಬಲವಿಲ್ಲದೇ, ಕರ್ತೃತ್ವ, ಮಮಕಾರಗಳ ನಂಟು ಇರದೇ ಮಾಡಿದ ವಿಹಿತಕರ್ಮವು "ಸಾತ್ವಿಕ" ವೆನಿಸುತ್ತದೆ.[5]

ಫಲದ ಹಂಬಲವಿರುವ, ಅಹಂಕಾರದಿಂದ ಕೂಡಿದ, ಬರೀ ದೇಹವನ್ನು ದಂಡಿಸಿ ಮಾಡಿದ ಕರ್ಮವು ರಾಜಸವೆನಿಸುತ್ತದೆ.[6]

ಅನಂತರದ ಪರಿಣಾಮ, ನಾಶ, ಹಿಂಸೆಗಳನ್ನು ಹಾಗೂ ತನ್ನ ಯೋಗ್ಯತೆಯನ್ನು ಗಮನಿಸದೇ,ಅವಿವೇಕದಿಂದ ಮಾಡಿದ ಕರ್ಮವು ತಾಮಸವೆನಿಸುತ್ತದೆ.[7]

ಮತ್ತೆ ಕರ್ಮಗಳು ಎರಡು ವಿಧ. ಪ್ರವೃತ್ತಕರ್ಮ, ನಿವೃತ್ತಕರ್ಮ ಎಂಬುದಾಗಿ.

ಇಹದಲ್ಲಿ ಸಂಪತ್ತು ಮೊದಲಾದವು,ಪರದಲ್ಲಿ ಸ್ವರ್ಗಾದಿಗಳು ಬೇಕೆಂಬ ಇಚ್ಛೆಯಿಂದ ಮಾಡಿದ ಕರ್ಮಗಳು ಪ್ರವೃತ್ತಕರ್ಮಗಳೆನಿಸುತ್ತವೆ.[8]

ಜ್ಞಾನ ಪೂರ್ವಕವಾಗಿ, ನಿಷ್ಕಾಮನೆಯಿಂದ ಮಾಡಿದ ಕರ್ಮಗಳು ನಿವೃತ್ತ ಕರ್ಮಗಳೆನಿಸುತ್ತವೆ.[9]

ಪ್ರವೃತ್ತ, ಕಾಮ್ಯ, ರಾಜಸ, ತಾಮಸ ಕರ್ಮಗಳನ್ನು ಬಿಟ್ಟು ನಿವೃತ್ತ ಸಾತ್ವಿಕ ನಿತ್ಯ, ನೈಮಿತ್ತಿಕ ಕರ್ಮಗಳನ್ನು ಮಾತ್ರ ಮಾಡಬೇಕಾದುದು ಅವಶ್ಯ.

---

5. ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।
ಅಫಲ ಪ್ರೇಪ್ಸುನಾ ಕರ್ಮ ಯತ್ತತ್ ಸಾತ್ವಿಕಮುಚ್ಯತೇ ॥ ಗೀತಾ (18-23)
6. ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ಗೀತಾ (18-24)
7. ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ ಯತ್ತತ್ ತಾಮಸಮುಚ್ಯತೇ ॥ ಗೀತಾ (18-25)
8. ಇಹ ಚಾಮುತ್ರ ವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ ॥
9. ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ॥

ಈ ಸ್ವವಿಹಿತ ಕರ್ಮಗಳನ್ನು ಆಚರಿಸುವಾಗ ಈ ಕೆಳಗಿನ ಅನುಸಂಧಾನ ಇರುವುದು ಅತ್ಯಂತ ವಿಹಿತವಾಗಿದೆ.

ಎಲ್ಲ ಕರ್ಮಗಳು ಭಗವತ್ಪ್ರಸಾದವನ್ನು ತಂದುಕೊಡಲಿ ಎಂಬ ಈಶ್ವರಾರ್ಪಣ ಬುದ್ಧಿಯಿಂದ ಮಾಡಬೇಕು.

ಎಲ್ಲ ಕರ್ಮಗಳನ್ನು ಭಗವಂತನೇ ಸ್ವತಂತ್ರನಾಗಿ ನನ್ನಿಂದ ಮಾಡಿಸುತ್ತಾನೆಂಬ ಬುದ್ಧಿಯಿಂದ ಮಾಡಬೇಕು.

ಹೀಗೆ ಮಾಡಿದ ಸ್ವವಿಹಿತಕರ್ಮಗಳು ಜ್ಞಾನದ್ವಾರಾ ಮೋಕ್ಷವನ್ನು ತಂದು ಕೊಡುವುದು ನಿಶ್ಚಿತವೇ.



# ಜೀವನು ವೈರಾಗ್ಯ ಹೊಂದಬೇಕು.

ಈ ಪ್ರಪಂಚದಲ್ಲಿ ಹುಟ್ಟಿಬಂದ ಪ್ರತಿಯೊಬ್ಬ ಜೀವನು ಒಂದು ಕ್ಷಣಕಾಲವೂ ಕರ್ಮ ಮಾಡದೇ ಇರಲಾರ. ಕಾಯಿಕ, ವಾಚನಿಕ, ಮಾನಸಿಕ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ.[1]

ಹೀಗೆ ಕರ್ಮಗಳನ್ನು ಮಾಡುವ ಜೀವನಿಂದ ಪುಣ್ಯಕರ್ಮಗಳೂ, ಪಾಪ ಕರ್ಮಗಳೂ ಘಟಿಸುತ್ತವೆ. ಪುಣ್ಯಕರ್ಮಗಳಿಂದ ಸ್ವರ್ಗವೂ ವಿರುದ್ಧ (ಪಾಪ) ಕರ್ಮಗಳಿಂದ ನರಕವೂ ಆಗುತ್ತದೆ. (ದೊರೆಯುತ್ತದೆ).[2]

ಮಾಡಿದ ಕರ್ಮಗಳು ಭೋಗದಿಂದ ಕ್ಷಯಿಸಿದರೂ, ಮತ್ತೂ ಕರ್ಮ ಶೇಷವುಳ್ಳವನಾಗಿಯೇ ಜೀವನು ಮತ್ತೆ ಹುಟ್ಟಿಬರುತ್ತಾನೆ. ಏಕೆಂದರೆ ಅನುಭವ, ಶ್ರುತಿ ಸ್ಮೃತಿಗಳು ಹಾಗೆ ಇರುತ್ತವೆ.[3]

ಜೀವನು ಸ್ವರ್ಗನರಕಾದಿಗಳಲ್ಲಿ ಪೂರ್ವಕರ್ಮಫಲಗಳನ್ನುಂಡು ಉಳಿದ ಕರ್ಮದಿಂದಲೇ ಈ ಭೂಲೋಕಕ್ಕೆ ಬರುತ್ತಾನೆ. ಮತ್ತು ಅನೇಕ ಕರ್ಮಗಳನ್ನು ಮಾಡುತ್ತಾನೆ. ಪುನಃ ಊರ್ಧ್ವಲೋಕಗಳಿಗೆ ಹೋಗುತ್ತಾನೆ. ಪುನಃ ಬರುತ್ತಾನೆ. ಹೀಗೆ ವೇದಗಳು ಹೇಳುತ್ತವೆ.[4]

ತನ್ನ ಹದಿನಾಲ್ಕನೆಯ ವರ್ಷದಿಂದಾರಂಭಿಸಿ ಈ ಜೀವನು ನಿಯಮವಾಗಿಯೇ ಏನು ಕರ್ಮಗಳನ್ನು ಮಾಡುವನೋ ಆ ಕರ್ಮಗಳು ಹತ್ತಕ್ಕೆ ಕಡಿಮೆ ಇಲ್ಲದಂತೆ ದೇಹಗಳಿಗೆ ಕಾರಣವಾಗುತ್ತವೆ. ಹೀಗಿದ್ದ ಮೇಲೆ ಕರ್ಮಕ್ಷಯದಿಂದ ಮೋಕ್ಷವು ಹೇಗೆ

1. ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ । ಗೀತಾ.
2. ಶುಭೇನ ಕರ್ಮಣಾ ಸ್ವರ್ಗಂ ನಿರಯಂಚ ವಿಕರ್ಮಣಾ ॥ ಅಣುಭಾಷ್ಯ
3. ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ ॥ (3-1-8)
4. ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ. ಪುನರ್ಗಚ್ಛತಿ ಪುನರಾಗಚ್ಛತಿ ಇತಿ ಶ್ರುತೇಃ ॥

ಆಗುತ್ತದೆ? ಇವೇ ಮೊದಲಾದ ಸ್ಮೃತಿಗಳು ಇರುವುದರಿಂದ ಕರ್ಮ ಶೇಷವುಳ್ಳವನಾಗಿಯೇ ಪುನಃ ಭೂಮಿಗೆ ಬರುತ್ತಾನೆ.[5]

ಪುಣ್ಯ ಪಾಪದ ಫಲಗಳಾಗಿ ಸ್ವರ್ಗನರಕಗಳನ್ನು ಅನುಭವಿಸಿದರೂ, ಪುಣ್ಯ ಪಾಪಗಳ ಶೇಷವುಳ್ಳವನಾಗಿಯೇ ಭೂಲೋಕವನ್ನು ಹೊಂದುತ್ತಾನೆ. ಅಂದ ಮೇಲೆ ಮುಕ್ತಿ ಹೊಂದುವುದೆಂತು? ತದರ್ಥವಾಗಿ ಜೀವನು ಜ್ಞಾನ, ಭಕ್ತಿ, ವೈರಾಗ್ಯಾದಿ ಸಾಧನಗಳನ್ನು ಅವಶ್ಯವಾಗಿ ಹೊಂದಬೇಕು.

ವೈರಾಗ್ಯವನ್ನು ಹೊಂದಿದ ಜೀವನಿಗೆ ಭಗವಂತನಲ್ಲಿ ಭಕ್ತಿಯು ಉಂಟಾಗುತ್ತದೆ. ಈ ಭಕ್ತಿಯಿಂದ ಭಗವಂತನ ಉಪಾಸನೆ ಮಾಡಬೇಕು. ಬಹುಕಾಲ ಮಾಡಿದ ಉಪಾಸನೆಯಿಂದ ಅಪರೋಕ್ಷ ಜ್ಞಾನವಾಗುತ್ತದೆ. ಅಪರೋಕ್ಷ ಜ್ಞಾನವನ್ನು ಹೊಂದಿದ ಭಕ್ತನಿಗೆ ಭಗವಂತನು ಮುಕ್ತಿಯನ್ನು ದಯಪಾಲಿಸುತ್ತಾನೆ.



5. ಆಚತುರ್ದಶಮಾದ್ವರ್ಷಾತ್ಕರ್ಮಾಣಿ ನಿಯಮೇನ ತು ।
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ॥
ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ?
ಇತ್ಯಾದಿ ಸ್ಮೃತೇಶ್ಚ ಶೇಷವಾನ್ ಏವ ಆಯಾತಿ ॥

# ದಾಸಸಾಹಿತ್ಯದಲ್ಲಿ "ಜೀವ"ನ ಗುಣಲಕ್ಷಣಗಳು.

ನಮ್ಮ ಹರಿದಾಸರು ತಮ್ಮ ಕನ್ನಡ ಹರಿದಾಸಸಾಹಿತ್ಯದಲ್ಲಿ "ಜೀವ"ನ ಗುಣಲಕ್ಷಣಗಳನ್ನು ತಿಳಿಸಿಕೊಟ್ಟಿದ್ದಾರೆ–

'ಜೀವ'ನು ಮಾತೃಗರ್ಭದಲ್ಲಿರುವಾಗಲೇ ಅವನ ಆಯುಷ್ಯ,ಕರ್ಮ ಸಂಪತ್ತು, ವಿದ್ಯೆ, ಮರಣ, ಇವುಗಳನ್ನು ಶ್ರೀಹರಿಯ ಆಜ್ಞೆಯಂತೆ ಬ್ರಹ್ಮದೇವರು ನಿಶ್ಚಿತಪಡಿಸಿ ಸೃಷ್ಟಿಮಾಡುತ್ತಾರೆ. ಈ ವಿಷಯವನ್ನು ದಾಸಶ್ರೇಷ್ಠರಾದ ಶ್ರೀವಿಜಯದಾಸರು ತಮ್ಮ ಸುಳಾದಿಯೊಂದರಲ್ಲಿ ವರ್ಣಿಸಿದ್ದಾರೆ.,

ಫಣೆಯಲ್ಲಿ ಬರದಿಪ್ಪ ಆಯು ಕರ್ಮ ವಿದ್ಯಾ
ಧನ ನಿಧನ ನೇಮಿಸಿ ಹರಿ ಆಜ್ಞಾದಲ್ಲಿ
ಜನಿಸುವಾಗಲಿ ಅವರವರ ಪಡಿಪಾನ
ಕೊನೆ ಸೆರಗಿನಲ್ಲಿ ಕಟ್ಟಿ ಕಟ್ಟಿಹನೋ ॥

ಇಲ್ಲಿ ಗರುಡ ಪುರಾಣದ ಈ ಶ್ಲೋಕದ ಭಾವವು ಅಡಗಿದೆ.

ಆಯುಃ ಕರ್ಮ ಚ ವಿತ್ತಂ ಚ ವಿದ್ಯಾನಿಧನಮೇವ ಚ ।
ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥

"ಜೀವ"ನ ಪರಿಮಾಣವನ್ನು ಶ್ರೀಜಗನ್ನಾಥದಾಸರು ತಮ್ಮ ಒಂದು ಪದ್ಯದಲ್ಲಿ ತಿಳಿಸಿರುವುದನ್ನು ಕಾಣಬಹುದು.

ಕುದುರೆಬಾಲದ ಕೊನೆಯ ಕೂದಲ
ತುದಿ ವಿಭಾಗವ ಮಾಡಿ ಶತ ವಿಧ
ವದರೊಳೊಂದನು ನೂರು ಭಾಗವ ಮಾಡಲೆಂತಿಹದೋ ।
ವಿಧಿ ಭವಾದಿ ಸಮಸ್ತ ದಿವಿಜರ
ಮೊದಲು ಮಾಡಿ ತೃಣಾಂತ ಜೀವರೊ
ಳಧಿಕ ನ್ಯೂನತೆಯಿಲ್ಲವೆಂದಿಗೂ ಜೀವ ಪರಮಾಣು ॥

ಶ್ರೀಹರಿಕಥಾಮೃತಸಾರ (9-7)

ಕುದುರೆಬಾಲದ ತುದಿಗೂದಲ ತುದಿಯನ್ನು ನೂರು ಭಾಗ ಮಾಡಿ ಅದರಲ್ಲಿ ಒಂದನ್ನು ಮತ್ತೆ ನೂರು ಭಾಗ ಮಾಡಿದರೆ ಎಷ್ಟು ಸೂಕ್ಷ್ಮವೋ ಅಷ್ಟು ಸೂಕ್ಷ್ಮವಾದ

ಪರಿಮಾಣವುಳ್ಳವನು ಜೀವನು. ಈ ಮಾತು ತೃಣಜೀವರಿಂದ ಬ್ರಹ್ಮದೇವರವರೆಗೆ ಎಲ್ಲರಿಗೂ ಅನ್ವಯಿಸುತ್ತದೆ. ಇದನ್ನು ತತ್ವಸಾರ ಗ್ರಂಥದಲ್ಲಿ ತಿಳಿಸಿದ್ದಾರೆ.

ಅಶ್ವವಾಲಾಗ್ರಮಾದಾಯ ವಿಭಜ್ಯ ಶತಧಾ ಹಿ ತತ್ ।
ಪುನಶ್ಚ ಶತಧಾ ಭಿನ್ನಂ ಕಿಯನ್ಮಾನಂ ಭವಿಷ್ಯತಿ ।
ತಾವದ್ ಬ್ರಹ್ಮಾದಿ ಜೀವಾನಾಂ ಪರಿಮಾಣಂ ಪ್ರಕೀರ್ತಿತಮ್ ॥

ಜೀವನು ನಿತ್ಯವ್ವಾಗಿದ್ದಾನೆ. ಅವನನ್ನು ಯಾರೂ ನಾಶಪಡಿಸಲಾರರು. ಏನೂ ಮಾಡಲಾರರು. ಅವನ ದೇಹಗಳು ನಾಶವಾಗುವಂತಹವು. ಈ ವಿಷಯವನ್ನು ಶ್ರೀವ್ಯಾಸರಾಜರು ತಮ್ಮ ವೃತ್ತನಾಮ "ಭಗವದ್ಗೀತಾಸಾರದಲ್ಲಿ" ಸುಂದರವಾಗಿ ಬಣ್ಣಿಸಿದ್ದಾರೆ.

ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ । ಈ ದೇಹಕ್ಕೆ । ಪಾವಕ ದಾಹಕ್ಕೆ ।
ಉದಕಗಳಿಂದ ವೇದನೆ ಯಾಕೆ । ಈ ಜೀವಕ್ಕೆ । ಮಾರುತನ ಕೋಪಕ್ಕೆ ।
ನಿತ್ಯ ಅಭೇದ್ಯ ತಾ ಜೀವನ ಸನಾತನ । ವಸ್ತ್ರದ್ವಾಂಗೆ ಈ ತನುವು ।
ಆದಾವು ಹೋದಾವು ನಿನಗಯ್ಯ । ನನಗಿಲ್ಲಯ್ಯ । ಅದ ನಾಬಲ್ಲೆನಯ್ಯ ॥

ಇದನ್ನು ಶ್ರೀಭಗವದ್ಗೀತೆಯಲ್ಲಿ ಶ್ರೀಕೃಷ್ಣ ತಿಳಿಸಿರುವ ಪರಿ ಹೀಗಿದೆ.

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥
ಅಚ್ಛೇದ್ಯೋಽಯಂ ಅದಾಹ್ಯೋಽಯಂ ಅಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತ ಸ್ಥಾಣುಃ ಅಚಲೋಽಯಂ ಸನಾತನಃ ॥ (2-23,24)

ಜೀವನು ಅಸ್ವತಂತ್ರನು, ಭಗವಂತನು ಸ್ವತಂತ್ರನು, ಇಬ್ಬರೂ ಅನೇಕ ವಿರುದ್ಧ ಧರ್ಮದಿಂದ ಕೂಡಿದವರಾಗಿದ್ದಾರೆ. ಶ್ರೀಜಗನ್ನಾಥದಾಸರು ಹೇಳುತ್ತಾರೆ.-

ಅಸ್ವತಂತ್ರನು ಜೀವ ಹರಿ ಸ
ರ್ವಸ್ವತಂತ್ರನು ನಿತ್ಯ ಸುಖಮಯ
ನಿಃಸ್ವ ಬದ್ಧಾಲ್ಪಜ್ಞ ಶಕ್ತಿ ಸುದುಃಖಿ ನಿರ್ವಿಣ್ಣ ।
ಹ್ರಸ್ವದೇಹಿ ಸನಾಥ ಜೀವನು
ವಿಶ್ವವ್ಯಾಪಕ ಕರ್ತೃಬ್ರಹ್ಮ ಸ
ರಸ್ವತೀಶಾದ್ಯಮರನುತ ಹರಿ ಎಂದು ಕೊಂಡಾಡು ॥

ಶ್ರೀಹರಿಕಥಾಮೃತಸಾರ (11-3)

ಜೀವನು ಅಸ್ವತಂತ್ರನು, ಶ್ರೀಹರಿ ಸರ್ವಸ್ವತಂತ್ರನು, ಸದಾ ಆನಂದಮಯನು, ಜೀವನು ನಿಃಸ್ವನು (ಯಾವ ಸೊತ್ತನ್ನೂ ಹೊಂದದಿರುವವನು) ಸಂಸಾರದಲ್ಲಿ ಬದ್ಧನು. ಅಲ್ಪಜ್ಞನು, ಅಲ್ಪಶಕ್ತನು, ದುಃಖಿಯು, ನಿರ್ವಿಣ್ಣನು, ಅಣುಶರೀರಿಯು, ಶ್ರೀಹರಿಯನ್ನು ಸ್ವಾಮಿಯಾಗಿ ಹೊಂದಿದವನು, ಶ್ರೀಹರಿಯು ವಿಶ್ವವ್ಯಾಪಕನು, ಜಗತ್‌ಕರ್ತನು, ಬ್ರಹ್ಮ, ಸರಸ್ವತೀ, ರುದ್ರ ಮೊದಲಾದ ದೇವತೆಗಳಿಂದ ಸ್ತುತ್ಯನು ಎಂಬುದಾಗಿ ನಿತ್ಯವೂ ಕೊಂಡಾಡುತ್ತಿರು.

ಈ ಕೆಳಗಿನ ಪ್ರಮಾಣದಿಂದ ಮೇಲೆ ತಿಳಿಸಿದ ವಿಷಯ ಸ್ಪಷ್ಟವಾಗುತ್ತದೆ.

**ಅಲ್ಪಶಕ್ತಿರಸಾರ್ವಜ್ಞಂ ಪಾರತಂತ್ರ್ಯಂ ಅಪೂರ್ಣತಾ ।**
**ಉಪಜೀವಕತ್ವಂ ಜೀವತ್ವಂ ಈಶತ್ವಂ ತದ್ವಿಪರ್ಯಯಃ ॥**

ಜೀವನಿಗೆ ಲಿಂಗಶರೀರವು ಭತ್ತದ ಕಾಳಿನ ಮೇಲೆ ಹೊಟ್ಟು ಆವರಿಸಿಕೊಂಡಿರುವಂತೆ ಯಾವಾಗಲೂ ಇರುತ್ತದೆ. ವಿರಜಾನದಿಯ ಸ್ನಾನಾನಂತರದಲ್ಲಿ ಈ ಲಿಂಗ ಶರೀರವು ಭಂಗ (ನಾಶ)ವಾಗುತ್ತದೆ.

ಶ್ರೀಜಗನ್ನಾಥದಾಸರು ತಿಳಿಸುವ ಪರಿ ಹೀಗಿದೆ-

**ಜೀವನಕೆ ತುಷದಂತೆ ಲಿಂಗವು**
**ಸಾವಕಾಶದಿ ಪೊಂದಿ ಸುತ್ತಲು**
**ಪ್ರಾವರಣ ರೂಪದಲಿ ಇಪ್ಪುದು ಭಗವದಿಚ್ಛೆಯಲಿ ॥**

ಶ್ರೀಹರಿಕಥಾಮೃತಸಾರ (9-13)

ಶ್ರೀವಿಷ್ಣುರಹಸ್ಯದಲ್ಲಿ ಇದನ್ನು ಬಣ್ಣಿಸಿದ್ದಾರೆ.

**ತತ್ತದಾಕಾರ ಸದೃಶೈಃ ಲಿಂಗದೇಹೈಃ ಅನಾದಿಭಿಃ ।**
**ಕಂಚುಕೈಃ ಇವ ಸಂಛನ್ನಾಃ ತತ್ತದ್ವರ್ಣೈಃ ಅನಾದಿಭಿಃ ॥**

ಜೀವನ ಶರೀರದಲ್ಲಿ ಬ್ರಹ್ಮನಾಡಿಯ ಮಧ್ಯದಲ್ಲಿ ಅಷ್ಟದಳ ಹೃತ್ಪದ್ಮವಿದೆ. ಇದರಲ್ಲಿ ಮೂಲೇಶ ನಾಮಕ ಬಿಂಬನಿದ್ದಾನೆ. ಈ ಬಿಂಬನ ಪಾದಪದ್ಮಗಳನ್ನು ಆಶ್ರಯಿಸಿ ಪ್ರಾಣದೇವರು ಇರುತ್ತಾರೆ. ಈ ಪ್ರಾಣದೇವರ ಪಾದಮೂಲವನ್ನು ಆಶ್ರಯಿಸಿ ಜೀವನು ಅನಾದಿ ಲಿಂಗದೇಹ ಹಾಗೂ ಅನಿರುದ್ಧದೇಹ ಸಹಿತನಾಗಿ ಇರುತ್ತಾನೆ. ರುದ್ರಾದಿ ದೇವತೆಗಳೆಲ್ಲರೂ ಅನಿರುದ್ಧ ದೇಹದಲ್ಲಿಯ ಜೀವನಿಗೆ ರಕ್ಷಕರಾಗಿ ಇರುತ್ತಾರೆ.

ಶ್ರೀಜಗನ್ನಾಥದಾಸರು ಶ್ರೀಹರಿಕಥಾಮೃತಸಾರದಲ್ಲಿ ಹೀಗೆ ಬಣ್ಣಿಸಿದ್ದಾರೆ-

**ಮಧ್ಯನಾಡಿಯ ಮಧ್ಯದಲ್ಲಿ ಹೃ**
**ತ್ಪದ್ಮಮೂಲದಿ ಮೂಲಪತಿ ಪದ**
**ಪದ್ಮ ಮೂಲದಲಿಪ್ಪ ಪವನನ ಪಾದಮೂಲದಲಿ ।**
**ಪೊಂದಿಕೊಂಡಿಹ ಜೀವ ಲಿಂಗಾನಿ**
**ರುದ್ಧ ದೇಹವಿಶಿಷ್ಟನಾಗಿ ಕ**
**ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥**

ಶ್ರೀಹರಿಕಥಾಮೃತಸಾರ (9-19)

ಈ ವಿಷಯವನ್ನು ಅಧ್ಯಾತ್ಮಮಾಲಾಗ್ರಂಥದಲ್ಲಿ ತಿಳಿಸಿದ್ದಾರೆ.

**ಅಂಗುಷ್ಠಪರಿಮಾಣೇಶಃ ಮೂಲೇಶಾಖ್ಯೋಽಸ್ತಿ ವೈ ಹರಿಃ ।**
**ಮುಖ್ಯಪ್ರಾಣೋಽಂಜಲಿಂ ಬಧ್ವಾ ಮೂಲೇಶಾಂಘ್ರಿಮುಪಾಶ್ರಿತಃ ।**
**ಮೂಲೇಶಸ್ಯಾಭಿಮುಖ್ಯೇನ ವರ್ತತೇ ಜೀವಸಂಯುತಃ ॥**

ಕೊನೆಯದಾಗಿ ಜೀವನು ಪ್ರಪಂಚಕ್ಕೆ ಬರುವಾಗ ಒಬ್ಬನೇ ಬರುತ್ತಾನೆ. ಹೋಗುವಾಗ ಒಬ್ಬನೇ ಹೋಗುತ್ತಾನೆ. ಅವನು ಮಾಡಿದ ಭಗವನ್ನಾಮಸ್ಮರಣೆ, ದಾನ, ಧರ್ಮಗಳು ಮಾತ್ರ ಅವನ ಜೊತೆಯಲ್ಲಿ ಹೋಗುತ್ತವೆ. ಶ್ರೀಕನಕದಾಸರು ಇದನ್ನು ಮಾರ್ಮಿಕವಾಗಿ ತಿಳಿಸಿದ್ದಾರೆ-

**ಆರೂ ಸಂಗಡ ಬಾಹೋರಿಲ್ಲ । ಸಿರಿ**
**ನಾರಾಯಣನ ಸ್ಮರಣೆ ನೆರೆ ಬಾಹೋದಲ್ಲದೇ ॥**

ಇದನ್ನೇ ಶ್ರೀಮದ್‌ಭಾಗವತದಲ್ಲಿ ಹೀಗೆ ತಿಳಿಸಿಕೊಟ್ಟಿದ್ದಾರೆ-

**ಏಕಃ ಪ್ರಸೂಯತೇ ಜಂತುಃ ಏಕ ಏವ ಪ್ರಲೀಯತೇ ॥ ಹಾಗೂ**
**ಜನ್ಮಲಾಭಃ ಪರಃ ಪುಂಸಾಂ ಅಂತೇ ನಾರಾಯಣಸ್ಮೃತಿಃ ॥**

ಈ ವಾಕ್ಯಗಳು ಮೇಲೆ ಹೇಳಿದ ವಿಷಯವನ್ನು ಸ್ಪಷ್ಟಪಡಿಸುತ್ತವೆ.



# ಜೀವನ ದೇಹದಲ್ಲಿ ಭಗವದ್ರೂಪಗಳು.

ಜೀವನ ದೇಹದ ಬೇರೆ ಬೇರೆ ಅವಯವಗಳಲ್ಲಿ ಅನೇಕ ಭಗವದ್ರೂಪಗಳು ಇರುತ್ತವೆ. ಅವುಗಳನ್ನು ಶ್ರೀಜಗನ್ನಾಥದಾಸರು ತಮ್ಮ ಮೇರು ಕೃತಿ ಹರಿಕಥಾಮೃತ ಸಾರದಲ್ಲಿ ತಿಳಿಸಿಕೊಟ್ಟಿದ್ದಾರೆ.-

**ತಲೆಯೊಳಿಹ ನಾರಾಯಣನು ಗಂ**
**ಟಲಡಿ ಒಡಲೊಳು ವಾಸುದೇವನು**
**ಬಲದಲಿಹ ಪ್ರದ್ಯುಮ್ನ ಎಡಭಾಗದಲಿ ಅನಿರುದ್ಧ।**
**ಕೆಳಗಿನಂಗದಿ ಸಂಕರುಷಣನ**
**ತಿಳಿದು ಈ ಪರಿ ಸಕಲ ದೇಹಗಳೊಳಗೆ**
**ಪಂಚಾತ್ಮಕನ ರೂಪವ ನೋಡು ಕೊಂಡಾಡು ॥**

ಪಂಚಮಹಾಯಜ್ಞಸಂಧಿ 6-16

ತಲೆಯಲ್ಲಿ ನಾರಾಯಣನು, ಗಂಟಲ ಕೆಳಗಿನ ಭಾಗದಲ್ಲಿ ವಾಸುದೇವನು, ಬಲಭಾಗದಲ್ಲಿ ಪ್ರದ್ಯುಮ್ನನು, ಎಡಭಾಗದಲ್ಲಿ ಅನಿರುದ್ಧನು, ಕೆಳಗಿನ ದೇಹದಲ್ಲಿ ಸಂಕರ್ಷಣನು ಇರುವನು ಈ ರೀತಿಯಾಗಿ ಸಕಲ ದೇಹಗಳಲ್ಲಿ ಪಂಚರೂಪದ ನಾರಾಯಣನ ರೂಪಗಳನ್ನು ತಿಳಿದು ನೋಡು, ಕೊಂಡಾಡು.

**ಪದುಮನಾಭನು ಪಾಣಿಯೊಳಗಿಹ**
**ವದನದಲಿ ಹೃಷೀಕೇಶ ನಾಸಿಕ**
**ಸದನದಲಿ ಶ್ರೀಧರನು ಜಿಹ್ವೆಯೊಳಿಪ್ಪ ವಾಮನನು।**
**ಮೃದುಲ ತ್ವಗ್ದೇಶದಿ ತ್ರಿವಿಕ್ರಮ**
**ಮಧುವಿರೋಧಿಯು ಲೋಚನದಿ ಕ**
**ರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ 6-18.**

ಪದ್ಮನಾಭನು ಕೈಯಲ್ಲಿ ನೆಲೆಸಿರುವನು. ಬಾಯಿಯಲ್ಲಿ ಹೃಷೀಕೇಶನು. ಮೂಗಿನಲ್ಲಿ ಶ್ರೀಧರನು, ನಾಲಿಗೆಯಲ್ಲಿ ವಾಮನನು, ಮೃದುವಾದ ಚರ್ಮದಲ್ಲಿ ತ್ರಿವಿಕ್ರಮನು,

ಕಣ್ಣಿನಲ್ಲಿ ಮಧುಸೂದನನು, ಶ್ರೀಹರಿಯು ವಿಷ್ಣುನಾಮಕನಾಗಿ ಶ್ರವಣ ಎಂದೆನಿಸಿ ಕರ್ಣದಲ್ಲಿ ಇರುವನು.[1]

**ಮನದೊಳಿಹ ಗೋವಿಂದ ಮಾಧವ**
**ಧನಪಸಖ ತತ್ವದೊಳು ನಾರಾ**
**ಯಣ ಮಹತ್ತತ್ವದೊಳು ಅವ್ಯಕ್ತದೊಳು ಕೇಶವನು ।**
**ಇನಿತು ರೂಪವ ದೇಹದೊಳು ಚಿಂ**
**ತನೆಯ ಗೈವ ಮಹಾತ್ಮರಿಳೆಯೊಳು**
**ಮನುಜರವರಲ್ಲಮರರೇ ಸರಿ ಹರಿಕೃಪಾಬಲದಿ ॥ (6-19)**

ಮನಸ್ಸಿನೊಳು ಗೋವಿಂದನು, ಮನಸ್ತತ್ತ್ವದಲ್ಲಿ ಮಾಧವನು, ಮಹತ್ತತ್ತ್ವದಲ್ಲಿ ನಾರಾಯಣನು, ಅವ್ಯಕ್ತತತ್ವದಲ್ಲಿ ಕೇಶವನು ಇರುವನು. ಇಷ್ಟು ರೂಪಗಳನ್ನು ದೇಹದಲ್ಲಿ ಶ್ರೀಹರಿಕೃಪಾಬಲದಿಂದ ಚಿಂತನೆಯನ್ನು ಮಾಡುವ ಮಹಾತ್ಮರು ಭೂಮಿಯಲ್ಲಿ ಮನುಷ್ಯರೇ ಅಲ್ಲ ಅವರು ದೇವತೆಗಳೇ ಸರಿ.



1. ಹಸ್ತಗಃ ಪದ್ಮನಾಭೋ ಹಿ ಹೃಷೀಕೇಶೋ ಮುಖೇಸ್ಮೃತಃ ।
ಶ್ರೀಧರೋ ನಸಿ ಜಿಹ್ವಾಯಾಂ ವಾಮನೋಽಸ್ತಿ ತ್ರಿವಿಕ್ರಮಃ ॥
ತ್ವಕ್ಚಕ್ಷುಷೋರ್ಮಧುದ್ವೇಷೀ ವಿಷ್ಣುರ್ಜೀವಸುಕರ್ಣಯೋಃ ॥ ಪುರಾಣವಚನ

# ದಾಸ ಸಾಹಿತ್ಯ

## ಜೀವನ ಸ್ವರೂಪ

**ಶ್ರೀ ಪ್ರಾಣೇಶವಿಠ್ಠಲರ ಕೃತಿ**

ಸುಖದುಃಖಿ ಭೋಗಿ ಜೀವನು ಅಸ್ವತಂತ್ರ ಬಹು
ಕಕುಲಾತಿವುಳ್ಳವನು ದುರ್ವಿಷಯದಿ ।
ಲಕುಮೀಶನಲ್ಲಿ ಭಕ್ತಿವಿವರ್ಜಿತನು ಪ್ರತಿಕ್ಷ
ಣಕೆ ಅನಂತ ಅಪರಾಧಿ ಜನ್ಮ ಮೃತಿವುಳ್ಳವನನು ॥

ಆಧಿವ್ಯಾಧಿಗಳಿಂದ ಪೀಡಿತನು ಅಜ್ಞಾನಿ
ಮಾಧವನ ಬಂಧಕ ಶಕುತಿಯೊಳಗಿಹ ।
ತಾಧರಿಸಿಹನು ಪ್ರಾಕೃತ ಪ್ರಾಕೃತಾವರಣ
ಭೇದವೇಸಿದ್ಧ ಇಂಥ ಜೀವರಿಗೂ ಹರಿಗೂ ॥

**ಜೀವರು ತ್ರಿವಿಧರು, ಜೀವರ ಲಕ್ಷಣ (ತರತಮ)**

ಒಂದಲ್ಲ ಸರ್ವಜೀವರು ಸತ್ವರಜತಮರು
ಯೆಂದು ಭೇದಗಳುಂಟವರ ತರತಮ ।
ಮುಂದಿನ ಪದದಿ ಪೇಳ್ವೆ ಸಜ್ಜನರು ಕೇಳಿ ಯಾ
ನಂದಬಡಲೆಂದು ವಿನಯದಲಿ ಬಿನ್ನೈಸುವೆನು ॥

ಛಿನ್ನ ಭಕ್ತರುಯೆನಿಪ ಎಲ್ಲದೇವತೆಗಳ
ಚ್ಛಿನ್ನ ಭಕ್ತರು ವಿಧೀರರ್ಧೆಂಡರು ।
ಚೆನ್ನಾಗಿ ಮುದದಿ ಈ ನಿರ್ಜರರ ತಾರತಮ್ಯ
ವನ್ನು ಕೇಳಿಕೋಬೇಕು ಜ್ಞಾನಿಗಳ ಮುಖದಿಂದ ॥

ವಿಧಿಮೊದಲು ತೃಣಜೀವ ಪರಿಯಂತ ಸಾತ್ವಿಕರು
ಇದರೊಳಗೆ ದೇವಋಷಿ ಪಿತೃಪನರರು ।
ಸುಧಿಗೆ ಯೋಗ್ಯರಜಾದಿಗೀರ್ವಾಣ ಗಂಧರ್ವ
ತುದಿಯಾಗಿ ಸಾಂಶರು ನಿರಂಶರುಳಿದವರೆಲ್ಲ ॥

### ರಾಜಸರಾದ ನಿತ್ಯಸಂಸಾರಿ ಜೀವರ ಲಕ್ಷಣ

ಇವರಿಂದ ಭಿನ್ನರಾಜಸರು ಗೋಭೂನರಕ
ತ್ರಿವಿಧಗತಿವುಳ್ಳವರು ಪಂಚಭೇದ ।
ವಿವರತರತಮ ದೇವರ ಮಾಹಾತ್ಮ್ಯೆಯನು ಅರಿಯ
ದವರು ಲಿಂಗ ಕಳೆಯರು ಧಾಮತ್ರಯ ಪೋಗದವರು ॥

### ತಾಮಸಜೀವರ ಲಕ್ಷಣ

ಸಂಸಾರಿಗಳಿಗೆ ಭಿನ್ನರು ತಮೋಗುಣದವರು
ಕಂಸಾರಿಯಲ್ಲಿ ದ್ವೇಷವವರ ಸ್ವಭಾವ ।
ಅಸುರಾರಿಗಳು ನಾಲ್ಕು ಪ್ರಕಾರ ದೈತ್ಯ ರಾ
ಕ್ಷಸರು ಪಿಶಾಚರವರನುಗರು ನರಾಧಮರು ॥

ಈ ನಾಲ್ಕು ಬಗೆಯ ಸುರರಿಗೆ ಕಲಿಯವನ
ಹೀನತನವೆಷ್ಟುಸುರಲಿ ಮಿಥ್ಯಾ
ಜ್ಞಾನಿ ಭೇದವನರಿಯ ಪಂಚಮಹಾಪಾತಕಿ ಪು
ರಾಣ ವೇದಗಳಿಗೆ ವಿರುದ್ಧಾರ್ಥ ಕಲ್ಪಿಸುವ ॥

### ಅನಾದಿಯಿಂ ಜೀವರ ತ್ರೈವಿಧ್ಯ ತ್ರಿವಿಧ ಫಲ

ಈ ವಿಧದಿ ಮೂರು ಗಣದಿಂದ ಪರಸ್ಪರ ಜೀವ
ಜೀವರಿಗೆ ಭೇದ ಯೋಗ್ಯತೆ ಪ್ರಕಾರ ।
ಮೂವರಿಗೆ ಪಾಪ ಮಿಶ್ರಿತ ಕರ್ಮ ಪುಣ್ಯ ಬಹು
ನೋವು ಸ್ವರ್ಗ ನರಕ ಸುಮೋಕ್ಷಾದಿ ಗತಿಯುಂಟು ॥



# ಜೀವಾಖ್ಯಸುಳಾದಿ

**ಸುಳಾದಿ ತಾಳ - 1** **ಶ್ರೀ ವಿಜಯದಾಸರಕೃತಿ**

ಜೀವ ಅಚ್ಛೇದ್ಯ ಅಭೇದ್ಯ ತೋಯಗರಳ ಶಸ್ತ್ರಗಳಿಂದ । ಪಾವಕ ಮಿಗಿಲಾದ ಉಪಹತಿಯಿಂದ ಸಾವಿಲ್ಲ ಸಾವಿಲ್ಲ । ಆವಾವ ಕಾಲಕ್ಕೆ ಪಾವನ್ನವಾಗಿಪ್ಪದು ಪರಮಸೂಕ್ಷ್ಮ। ಅವಿರಾನಂದ ಭಾವ ಭರಿತವಲ್ಲದೆ ಇದಕೆ। ನೋವಾಗದು ಕಾಣೋ ನಿಜರೂಪದಿತ್ರಿವಿಕಾರದಿಂದ ಪ್ರವರ್ತಿಮಾರ್ಗಕಾಣೋ। ಈ ವಿಧ ತಿಳಿವದು ಸತ್ಪಂಥಕ್ಕೆ ಜೀವ ಅಂಗುಟಾಗ್ರ ಮೂರುತಿ, ಜೀವಾಕಾರ ಮೂರುತಿ, ಪುರುಷ ಮೂರ್ತಿ । ಜೀವೇಂದ್ರಿಯಗಳಲಿ ತತ್ತತ್ ಸ್ಥಾನವಾಸಾ ಆವಾವ ರೂಪದಂತೆ ಇಪ್ಪ ಮೂರುತಿ । ಜೀವೋತ್ತಮ ವಿಡಿದು ತೃಣ ಜೀವರ ಪರ್ಯಂತ। ಯಾವತ್ತರೊಳಗಿದ್ದ ಅನಂತಮೂರ್ತಿ ಶ್ರೀ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ। ಜೀವನಾಮಕ ಅನಿರುದ್ಧ ಮೂರುತಿ। ಜೀವ ಸಹಿತವಾಗಿ ಇಂತು ಒಪ್ಪುವಾನೇಕ ಆವರ್ಣಗಳು ಇಪ್ಪ ಮೂರುತಿ । ಈ ವಿಚಾರವ ಗ್ರಹಿಸು ದೇವದೇವೇಶನ್ನ ಅಣು ಮಹತ್ತು ಕೋವಿದ ಪೂರ್ಣಾಂಬುಧಿ ಅಭಿನ್ನವಾದ ರೂಪ ಜೀವಾದೊಳಗೆ ಅಕ್ಕು ಸಿದ್ಧ ಪ್ರವಿತತಾ ತಾನಾಗಿ ಪತಿತರುದ್ಧರಿಪ ತಾವರೆ ಜಲದೊಳಗೆ ಇಪ್ಪ ತೆರದಿ। ಭಾವಿಸು ಎಲೆ ಮನುಜಾ ಜಿತಚಿತ್ತನಾಗಿ ನಿನ್ನ ಜೀವದೊಳಗೆ ಇದ್ದ ಮೂರ್ತಿಗಳ ದೈವ ಸ್ವಭಾವ ಕೇಳು. ಅಚಿಂತ್ಯಾದ್ಭುತ ಶಕ್ತಿ ಸೇವಿಸು ಭಕ್ತಿಯಲ್ಲಿ ಸಮಬುದ್ಧಿಲಿ ದೇವಕಿನಂದನ ವಿಜಯವಿಠ್ಠಲರೇಯ ಕಾವ ಕರುಣಾದಿಂದ ಧ್ಯಾನಾಂಗತನ ಮಾಡಿ ॥ 1 ॥

**ಸುಳಾದಿ - ತಾಳ -2**

ಅಂತರಾತ್ಮ ಮೂರುತಿ ಜೀವದ ಸ್ವರೂಪದಂತೆ ಇಪ್ಪದು ಕಾಣೋ ಎಲ್ಲೆಲ್ಲಿ ನೋಡಿದರೂ। ಅಂತವಿಲ್ಲ ನಿತ್ಯ ಅವರವರ ಚೇಷ್ಟೆಯಂತೆ ವ್ಯಾಪಾರವನು ಮಾಡಿಸುತಿಪ್ಪ। ಅಂತರಂಗದೊಳು ಈತ ಮಾಡುವ ಪರಿ ಅನಂತ ಮೂರುತಿಗಳು ಒಂದೇ ಕಾಲದಲ್ಲಿ, ನಿಂತು, ಕುಳಿತು, ಮಲಗಿ ನಾನಾ ಬಗೆಯಿಂದ। ಸಂತತ ಸ್ವರೂಪ ಕರಣ ಮಿಶ್ರವಾಗಿ ಭ್ರಾಂತಿಗೊಳಿಪ ಕಾಯಾ ತದಾತ್ಮಾದಲ್ಲಿ। ನಿಂತವರೊಳಗಿದ್ದು ಚರಿಯ ಮಾಳ್ದ ಲೀಲೆ ಮುಂದೆ ತಿಳಿದು ಗುಣಿಸು ಈತನ ನೀಕ್ಷಿಸದೆ । ಸಂತರು ಗತಿ ಸೇರುವ ಬಗೆ ಇಲ್ಲ ಹಂತರಿಗಾದರೂ ಈತನ ಕಾಣದಲೆ ಸಂತಾಪ ಪಡುವ ಗತಿಯಾಗದು ಕೇಳಿ । ಕಂತು ಜನಕನ ದ್ವೇಷಿಗಳಿವರೆನ್ನು । ಅಂತ ಇಲ್ಲದ ಮಹಿಮ ವಿಜಯವಿಠ್ಠಲರೇಯನ । ಯಂತೆಂತು ನೋಡಿದರು ಅದರಂತೆ ಫಲವೀವ ॥ 2 ॥

ಮನಸ್ಸು ಪರಮಾತ್ಮನೇ ಎಂದು, ಕೇವಲ ಮನ ಶಬ್ದ ಸರ್ವ ಸ್ವಾತಂತ್ರರಾ । ಜೀವಲೋಚನ ನಾರಾಯಣಗಲ್ಲದೆ । ದೇವತೆಗಳ ಮಧ್ಯ ಮರ್ತ್ತ್ಯೋರ್ವರಿಗುಂಟೆ । ಪಾವಕಾದಿ ಪಾವಕ ನೇತ್ರ ಪಾವಕ ಜೀವಾ ಜೀವಾ ಬಾಂಧವರಾ । ಜೀವ ಗರ್ಭಾಧಿಗಳಿಗೆ ಆವಾವ ಕಾಲಕ್ಕೆ ಸ್ವತಂತ್ರವಾಗಿ ಮಾಡಿಸುವ ಸಾಮರ್ಥ್ಯಕೆ । ಭೂವಲಯದೊಳು ನಾ ಕಾಣೆ ನಾ ಕಾಣೆ । ಕೋವಿದನಾದವನೆಂದು ಕೊಂಬನೋ । ಭಾವದಲ್ಲಿ ತನ್ನ ಅನುಭವ ತಾ ಬಲ್ಲ। ಜೀವ ಕರ್ಮ ಮಾಡಿತೆಂದು ವೇದಾವಳಿಯಲ್ಲಿ ಉಂಟೆ, ಉಂಟಾದರೆ ಕೇಳಿ । ದೇವತೆಗಳು ಮಾಡಿಸಿದಂತೆ ಈ ಜೀವ ಮಾಡಿದ ಕಾರಣದಿಂದ ಕಾಮಜನಕ ಜೀವಕ್ಕೆ ನೋವು ಪ್ರಾಪುತವಾಗಿ ಬಳಲುವನೆಂದು ಸಂಭಾವನೆಯಾಗಿದೆ ಸಂಧಿ ಸಂಕಟದಿಂದ ಕಾಮಜನಕ ನಮ್ಮ ವಿಜಯವಿಠ್ಠಲ ಕೃಪಾವಲೋಕನ ನಿತ್ಯ ಲೀಲಾ ವಿನೋದ ॥



# ಜೀವ ಭೂಮಿಗೆ ಬರುವ ಕ್ರಮ (ಜೀವ ಹೋಮ)

ಶ್ರೀಹರಿಕಥಾಮೃತಸಾರ (ಪಂಚಮಹಾಯಜ್ಞ ಸಂಧಿ)

ಜನನಿ ಪಿತ ಭೂ ವಾರಿದಾಂಬರ
ವೆನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ।
ನೆನೆದು ದಿವಸಗಳೆಂಬ ಸಮಿಧೆಗ
ಳನು ನಿರಂತರ ಹೋಮಿಸುತ ಪಾ
ವನಕೆ ಪಾವನ ನೆನಿಪ ಪರಮನ ಬೇಡು ಪರಮಸುಖ ॥

ಗಗನ ಪಾವಕ ಸಮಿಧೆ ರವಿ ರ
ಶ್ಮಿಗಳೆ ಧೂಮವು ಅರ್ಚಿಯೆನಿಪುದೆ
ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ ।
ಮೃಗವರೋದರನೊಳಗೆ ಐರೂ
ಪಗಳ ಚಿಂತಿಸಿ ಭಕ್ತಿರಸ ಮಾ
ತುಗಳೆ ಮಂತ್ರವ ಮಾಡಿ ಹೋಮಿಸುವರು ವಿಪಶ್ಚಿತರು ॥

ಪಾವಕನು ಪರ್ಜನ್ಯ ಸಮಿಧೆಯು
ಪ್ರಾವಹೀಪತಿ ಧೂಮಗಳೇ ಮೇ
ಘಾವಳಿಗಳರ್ಚಿ ಕ್ಷಣಪ್ರಭೆ ಗರ್ಜನವೆ ಕಿಡಿಯು ।
ಭಾವಿಸುವುದಂಗಾರ ಸಿಡಿಲೆಂ
ದೀ ವಿಧಾಗ್ನಿಯೊಳಬ್ಧಿಜಾತನ
ಕೋವಿದರು ಹೋಮಿಸುವರನುದಿನ ಪರಮಭಕುತಿಯಲಿ ॥

ಧರಣಿಯೆಂಬುಗೆ ಅಗ್ನಿ ಸಂವ
ತ್ಸರವೆ ಸಮಿಧೆ ವಿಹಾಯಸವೆ ಹೊಗೆ
ಇರುಳುರಿ ದಿಶಾಂಗಾರವಾಂತರ ದಿಗ್ವಲಯ ಕಿಡಿಯು ।
ವರುಷವೆಂಬಾಹುತಿಗಳಿಂದಲಿ
ಹರಿಯ ಮೆಚ್ಚಿಸಿ ಸಕಲರೊಳಗ
ಧ್ವರಿಯನಾಗಿರು ಸರ್ವರೂಪಾತ್ಮಕನ ಚಿಂತಿಸುತ – ॥

ಪುರುಷ ಶಿಖಿ ವಾಕ್ಸಮಿಧೆ ಧೂಮವು
ಕರಣವರ್ಚಿಯು ಜಿಹ್ವೆ ಶ್ರೋತ್ರಗ
ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವವು ।
ನಿರುತ ಭುಂಜಸುವನ್ನ ಯದುಕುಲ
ವರನಿಗವದಾನಗಳು ಎಂದೀ
ಪರಿ ಸಮರ್ಪಣೆ ಗೈಯೆ ಕೈಗೊಂಡನುದಿನದಿ ಪೊರೆವ ॥

ಮತ್ತೆ ಯೋಷಾಗ್ನಿಯೊಳು ತಿಳಿವುದು
ಪಸ್ಥ ತತ್ತ್ವವೆ ಸಮಿಧೆ ಕಾಮೋ
ತ್ಪತ್ತಿಪರ ಮಾತುಗಳೆ ಧೂಮವು ಯೋನಿ ಮಹದರ್ಚಿ ।
ತತ್ಪ್ರವೇಶಾಂಗಾರ ಕಿಡಿಗಳು
ಉತ್ಸಹಗಳುತ್ಸರ್ಜನವು ಪುರು
ಷೋತ್ತಮನಿಗವದಾನವೆನೆ ಕೈಗೊಂಡು ಮನ್ನಿಸುವ ॥

ಐದು ಅಗ್ನಿಗಳಲ್ಲಿ ಮರೆಯದೆ
ಐದು ರೂಪಾತ್ಮಕನ ಇಪ್ಪ
ತ್ತೈದು ರೂಪಗಳನುದಿನದಿ ನೆನೆವರಿಗೆ ಜನುಮಗಳ –
ಐದಿಸನು ನಳಿನಾಕ್ಷ ರಣದೊಳು
ಮೈದುನನ ಕಾಯ್ದಂತೆ ಸಲಹುವ
ಬೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು ॥

ಪಂಚನಾರೀ ತುರಗದಂದದಿ
ಪಂಚರೂಪಾತ್ಮಕನು ತಾ ಷಟ್
ಪಂಚ ರೂಪವ ಧರಿಸಿ ತತ್ತನ್ನಾಮದಿಂ ಕರೆಸಿ ।
ಪಂಚ ಪಾವಕ ಮುಖದಿ ಗುಣಮಯ
ಪಂಚ ಭೂತಾತ್ಮಕ ಶರೀರವ
ಪಂಚ ವಿಧ ಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು ॥



# ಜೀವನ ದೇಹದಲ್ಲಿ ಸಪ್ತಕಮಲಗಳು ಇತ್ಯಾದಿ.

ರಾಗ - ಭೈರವಿ, ಶ್ರೀ ವಿಜಯದಾಸರ ಸುಳಾದಿ ಧ್ರುವತಾಳ.

ಮೂಲಾಧಾರದಲ್ಲಿ ಚತುರದಳ ಪದುಮ ಪ್ರ । ವಾಳಮಣಿ ವರ್ಣದಂತೆಯಿಪ್ಪದು। ಏಳು ಮರುತಜನ ಅಲ್ಲಿ ವಾಸಾ । ನಾಲ್ಕು ವೇದಂಗಳು ಒಂದೊಂದು ದಳದಲ್ಲಿ। ಮೇಲಾಗಿ ಇರುತಿಪ್ಪವು ಪೊಳೆವುತ್ತಲ್ಲೀ। ವಾಲಯ ಬ್ರಹಸ್ಪತಿ ಸೋಮಜ ಸೋಮ ಶನಿ । ಕಾಲ ಪೋಗಾಡದೆ ನಿರುತ ಅಲ್ಲಿ । ಶೀಲ ಗುಣರಾಗಿ ಭಗವದ್ಧ್ಯಾನವ ಮಾಳ್ಪರು । ಆಳುಗಳಾಗಿ ತಮ್ಮಿಂದುತ್ತಮರಿಗೆ । ಶ್ರೀಲೋಲ ಅನಿರುದ್ಧನಿಯಾಮಕ ಮಿಕ್ಕ । ನೀಲವರ್ಣಾದಿ ಮೂರ್ತಿ ಅಲ್ಲಿ ಉಂಟು । ಕಾಲ ಚಕ್ರದಂತೆ ಜಡವಾಯು ಸಂಚಾರ। ಮೇಲಧೋಭಾಗ ಬಿಡದೆ ತಿರಗುವದು। ಪೇಳುವೆ ಸ್ವಾಯಂಭುವ ಇದಕ್ಕೆ ಅಭಿಮಾನಿಯಾಗಿ ವಿ । ಶಾಲ ಚಿತ್ತದಲ್ಲಿ ಅನಿರುದ್ಧನ್ನ । ಆಲಸ್ಯವಿಲ್ಲದೆ ಆರಾಧಿಸುವ ಕರು। ಣಾಳಿನ ಭಕ್ತಿಯಲ್ಲಿ ಲೋಲಾಡುತ । ಬಾಲ ಗೋಪಾಲ ವಿಜಯವಿಠಲರೇಯ। ಪಾಲಸಾಗರಶಾಯಿ ಅಪ್ರತಿಹತನಯ್ಯಾ ॥ 1 ॥

ಮಟ್ಟತಾಳ

ಪೊಕ್ಕಳ ಭಾಗದಲ್ಲಿ ಆರುದಳದ ಕಮಲಾ। ರಕ್ತನೀಲವರ್ಣ ಸಪ್ತವಾಯುಗಳಲ್ಲಿ। ತಕ್ಕವರು ಆರುಜನ ಹರಿರಾಣಿಯರು। ಮುಕ್ಕಣನ ಪುತ್ರ ಗಣಪತಿ ಅಭಿಮಾನಿ। ಚಕ್ಕನೆ ವಿಶ್ವಮೂರ್ತಿಯ ಪೂಜಿಸುವ ಲಕುಮಿಯ ರಮಣ ಪ್ರದ್ಯುಮ್ನ ನಿಯಾಮಕನು । ರಕ್ಕಸರಿಪು ಸಿರಿವಿಜಯವಿಠಲರೇಯ। ಪಕ್ಕಿ ಹಾರುವ ದೇಶ ನಿರ್ಮಿಸಿ ಇಪ್ಪ॥ 2 ॥

ತ್ರಿವಿಡಿತಾಳ.

ಹೃದಯದಲ್ಲಿ ಎಂಟುದಳದ ಕಮಲವು ಉಂಟು । ಉದಯಾದಿ ವರ್ಣದಂತಿಪ್ಪುದು । ಅದರಲ್ಲಿ ಅಷ್ಟವಸು ದಿಕ್ಪಾಲಕರುಂಟು । ಮುದದಿಂದ ಸಪ್ತಸಮೀರವಾಸ। ತ್ರಿದಶನಾಯಕ ಇದಕೆ ಅಭಿಮಾನಿಯಾಗಿ ನಿತ್ಯದಲಿ ಉಪೇಂದ್ರನ ಪೂಜಿಸುವಾ । ಇದರ ನಿಯಾಮಕ ಸಂಕರುಷಣಯೆನ್ನಿ ಪದೋಪದಿಗೆ ಖಳನ ದಹಿಸುವವನು । ಸದಮಲರಾಗಿ ಲಕುಮಿನಾರಾಯಣ । ಎದಿರಿಲಿಯಿಪ್ಪ ಪ್ರಾಜ್ಞನೆಂಬ

ರುದ್ರ । ಸುದರಶನ ಶಂಖ ಗದಾ ಪದುಮ ಧರಿಸಿ ಚತುರ ಹಸ್ತ । ಹದುಳ ಕೊಡುತಲಿಪ್ಪ ಭಕ್ತಜನಕೆ । ಪದವಿಗೇ ಈತನಿಂದಲಿ ಅಪರೋಕ್ಷವಾ । ಗದೆ ಬಿಂಬ ಕಾಂಬುವ ಮಾರ್ಗವಿಲ್ಲಾ । ಇದೆ ಮೂರುತಿ ಮುಕುತಿ ಯೋಗ್ಯನ ಸ್ವರೂಪದಂತೆ । ತದನಂತರದಲ್ಲಿ ತನ್ನಾಕಾರವಾ । ಹೃದಯಾದೊಳಗೆ ವೊಳವೊಳಗೆ ಪೊಳೆದು ಸ । ನ್ನಿಧಿಯಾಗಿಪ್ಪದು ಲಿಂಗದೊಳಗೇ । ಇದೆ ಪೋಗಲು ವಿರಜಾನದಿಯ ಸ್ನಾನದಿಂದ । ವೊದಗಿ ಜೀವನದಂತೆ ದೇವನಿಪ್ಪಾ ಪದುನಾಭ ನಮ್ಮ ವಿಜಯವಿಠಲರೇಯ । ತ್ರಿದಶಲೋಕದಲ್ಲಿ ಸುರರ ಕೂಡಾಡುವ ॥ 3 ॥

ರೂಪಕ ತಾಳ

ಉರದಲ್ಲಿ ದ್ವಾದಶದಳವುಳ್ಳ ಸರಸಿಜ । ಮಿರುಗುತಿದೆ ನೋಡಿ ಮುತ್ತಿನ ವರ್ಣದಲ್ಲಿ । ಉರುಕ್ರಮ ಸಹಿತ ದ್ವಾದಶ ಅಂಶು ಮಾಲೆಗಳು । ಮರುತಜನ ಜನಸಪ್ತರು ಮಹಾರುದ್ರ ಅಭಿಮಾನಿ । ನರಸಿಂಹ ಮೂರುತಿಯ ಪೂಜೆ ಮಾಡುತಲಿಪ್ಪ ಗಿರಿಜೆ ಸಮೇತದಲಿ ಮುಂದೆ ಅಹಿಪತಿಯೆಂದು । ಹರಿನಾಮಕ ಪರಮಾತ್ಮ ನಿಯಾಮಕನಾಹಾ । ಸುರರು ವಾಲಗದಿಂದ ಜಯ ಜಯವೆನುತಿಹರು । ಮೆರೆವ ವೈಭವದಿಂದ ವಿಜಯವಿಠಲ ಮಹಾ । ಧರಣಿಗೊಡೆಯನಾಗಿ ಗತಿಕೊಡುವ ನಮಗೆ ॥ 4 ॥

ಝುಂಪೆತಾಳ

ಇಂದ್ರಯೋನಿಯಲ್ಲಿ ಷೋಡಶದಳವುಳ್ಳ ಅರ । ವಿಂದ ಧವಳ ವರ್ಣದಂತಿಪ್ಪದು । ಚಂದ್ರ ಕಲಾಭಿಮಾನಿಗಳು ಅಲ್ಲಿ ವಾಸಾ । ಮುಂದೆ ದಧಿವಾಮನನ್ನ ಧ್ಯಾನಿಸುವ । ಅಂದವಾಗಿ ಸಪ್ತ ಮರುತಗಳು ಉಂಟು । ಫಣೀಂದ್ರನು ಅಭಿಮಾನಿ ಆ ಸ್ಥಾನದಲ್ಲಿ ವಾಸಾ । ನಂದ ಮೂರುತಿ ಲಕುಮೀ ರಮಣನ್ನ ಪೂಜಿಸುವ । ಪೊಂದಿಪ್ಪ ನಾರಾಯಣ ನಾಮಕ ಪರಮಾತ್ಮ । ಸಂದೇಹವಿಲ್ಲ ನಿಯಾಮಕನಾಗಿ ಗುಣ । ವೃಂದದಲ್ಲಿ ಪಾಲಿಸುವ ಸರ್ವರನ್ನು । ನಂದಗೋಪನ ಕಂದ ವಿಜಯವಿಠಲರೇಯ । ಎಂದೆಂದಿಗೆ ನಿತ್ಯ ತೃಪ್ತ ಜನರಲ್ಲಿ ವಾಸಾ ॥ 5 ॥

ಅಟ್ಟತಾಳ

ದ್ವಿದಳವುಂಟಾದ ಕಮಲ ಭ್ರೂಮಧ್ಯದಿ । ಮಧುಪುಷ್ಪ ವರ್ಣದಂತಿಪ್ಪುದು ಆವಾಗ । ಪದುಮ ಸಂಭವ ವಾಯುವಾಸ ದ್ವಯಭಾಗ । ಪದುಮನಾಭನ ವಹನ ಅಲ್ಲಿ ಅಭಿಮಾನಿ । ಸದರವಿಲ್ಲದೆ ಕೃಷ್ಣನ ಧೇನಿಸುವ ಜ್ಞಾ । ನದಲಿ ಕೊಂಡಾಡುತ ಸಪ್ತ ಮರುತ ಜನ । ಮೊದಲಾದವರು ಸೇವಿಸುವರು ಹರಿಪಾದ । ಇದಕೆ ನಿಯಾಮಕ ಕೃಷ್ಣನೆಂಬ ಮೂರುತಿ । ಅದುಭುತ ಮಹಿಮನೆ ವಿಜಯವಿಠಲರೇಯ ಉದಯ ಭಾಸ್ಕರನಂತೆ ತಪಕೆ ಮೆಚ್ಚಿ ಪೊಳೆವಾ ॥ 6 ॥

ಆದಿತಾಳ

ಸಾಸಿರದಳವುಳ್ಳ ಕಮಲ ಶಿರಸಿನಲ್ಲಿ । ಲೇಸಾಗಿ ಪೊಪ್ಪುತಿದೆ ವಜ್ರ ಪ್ರಕಾಶದಂತೆ । ವಿಶ್ವಾದಿ ರೂಪಗಳು ಒಂದೊಂದು ದಳದಲ್ಲಿ । ವಾಸವಾಗಿಪ್ಪ ತನ್ನಾಮಕ ಪ್ರಾಣ । ಸೂಸಿದ ಭಕ್ತಿಯಿಂದ ಭಜನೆ ಮಾಡುವ ನಿತ್ಯ । ವಾಸವಾದ್ಯರಿಂದ ಸ್ತುತಿಸಿಕೊಳ್ಳುತ । ಲೇಶ ಬಿಡದೆ ಇಲ್ಲಿ ಲೋಕೇಶ ಅಭಿಮಾನಿ । ಮೀಸಲ ಮನದಲ್ಲಿ ರಂಗನ್ನ ಧ್ಯಾನಿಸುವ । ವಾಸುದೇವ ನಾಮಕ ಪರಮಾತ್ಮ ನಿಯಾಮಕ । ದಾಸೋऽಹಂ ಎಂದವಗೆ ಸರ್ವದಳದಲ್ಲಿ ಪೊಳೆವ । ವಾಸುಕಿಶಯನ ನಮ್ಮ ವಿಜಯವಿಠಲರೇಯ । ಮೋಸವಿಲ್ಲದೆ ತನ್ನ ಸ್ಥಾನದಲ್ಲಿಟ್ಟು ಪೊರೆವಾ ॥ 7 ॥

ಜತೆ

ಬ್ರಹ್ಮನಾಡಿಯೊಳಗೀ ಪರಿ ವಿಧ ಉಂಟು । ಬ್ರಹ್ಮಾತೀತ ನಮ್ಮ ವಿಜಯವಿಠಲಸ್ವಾಮಿ ॥ 8 ॥



# ಜೀವ - ಪರಮಾತ್ಮರ ವೈಲಕ್ಷಣ್ಯ

ಶ್ರೀಕನಕದಾಸರ ಕೃತಿ

ಏನೆಂದು ಕೊಂಡಾಡಿ ಸ್ತುತಿಸಲೋ ದೇವ।
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವ ॥ ಪ ॥

ಹರಿ ಮುಕುಂದನು ನೀನು, ನರಜನ್ಮ ಹುಳು ನಾನು
ಪರಮಾತ್ಮ ನೀನು, ಪಾಮರನು ನಾನು,
ಗರುಡಗಮನನು ನೀನು ಮರುಳು ಪಾಪಿಯು ನಾನು
ಪರಮಜ್ಯೋತಿಯು ನೀನು ದುರುಳ ತಿರುಕನು ನಾನು ॥ 1 ॥

ಅಣುರೇಣು ತೃಣಗಳಲಿ ಪರಿಪೂರ್ಣ ನೀನು
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನು
ವಾಣಿಯರಸನ ಪೆತ್ತ ವೈಕುಂಠಪತಿ ನೀನು
ತನು ನಿತ್ಯವಲ್ಲದಾ ಗೊಂಬೆ ನಾನು ॥ 2 ॥

ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಕನು ನಾನು
ಅಂಬರೀಷಗೆ ಒಲಿದ ಅಕ್ರೂರಸಖ ನೀನು
ಡಂಬಕರ್ಮಿಯು ನಾನು ನಿರ್ಜಿತನು ನೀನು ॥ 3 ॥

ವಾರಿಧಿಶಯನನಾದ ಕಾರುಣ್ಯನಿಧಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನು
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿನ್ನನು ಬಯ್ವ ದುಷ್ಟ ನಾನು ॥ 4 ॥

ತಿರುಪತಿಯವಾಸ ಶ್ರೀವೆಂಕಟೇಶನು ನೀನು
ಚರಣಸೇವಕರ ಸೇವಕನು ನಾನು
ಬಿರುದುಳ್ಳವನು ನೀನು ಮೊರೆ ಹೊಕ್ಕೆನೈ ನಾನು
ಸಿರಿಕಾಗಿನೆಲೆಯಾದಿ ಕೇಶವನು ನೀನು ॥ 5 ॥

★★★

# ಜೀವರಿಗೆ ಕರ್ಮವೇ ತಾರಕ

ಶ್ರೀಗುರುಪುರಂದರವಿಠ್ಠಲರ ಕೃತಿ

ಕರ್ಮವೇ ತಾರಕವು ಜೀವರಿಗೆಲ್ಲ॥ ಪ ॥
ಕರ್ಮತಾರಕ ಕಾಣೋ ನಿಶ್ಚಯವೀ ಮಾತು
ದುರ್ಮತಿಯನು ಬಿಟ್ಟು ಮರ್ಮವನರಿತರೆ ॥ ಅ ॥ ಪ ॥

ಸ್ನಾನ ಒಂದೇ ಸಾಲದೇ ಜಲದಭಿ
ಮಾನಿ ದೇವರನರಿತು ಮೇಲೆ ತದ್ಗತ ಸಿರಿ ಲೋ
ಲನ್ನ ಬಿಂಬಿಸಿ ಮೂಲಕಾರಣ ಬಿಂ
ಬನಭಿಷೇಕವೆಂದರೆ ॥ 1 ॥

ಜಪವನಾಚರಿಸುವಲ್ಲಿ ಹೃಷೀಕಪ
ಉಪಮರಹಿತನೆನಿಸಿ
ಜಪಿಸುವ ವರ್ಣದೊಳಿದ್ದು ಪಾಮರನನು ಪತಿ –
ತಪಾವನನು ಪಾವನ ಮಾಳ್ಪನೆಂದರೆ ॥ 2 ॥

ಪ್ರಾಣಾಗ್ನಿಹೋತ್ರವೆಂಬೋ ಭೋ
ಜನವಸ್ತು ನೇಮವ ನೆರೆ ತಿಳಿದು ನಾಮ ಮೂರುಳ್ಳ
ಅನಲ ಮುಖ್ಯರೊಳಿಪ್ಪ ಶ್ರೀಮುಕುಂದನಿಗೆ ನಿ-
ತ್ಯನೇಮವನರಿತರೆ ॥ 3 ॥

ಕಾಲಕಾಲಕೆ ಬಿಡದೆ ಪವನರಾಯ ಮಾ
ಲೋಲನ ಅರ್ಚಿಸುವ
ಮೇಲೆ ಪ್ರತಿಮೆ ಶಾಲಗ್ರಾಮದಿ ನೆಲಸಿದ್ದು
ನೀಲವರ್ಣನೆ ಪೂಜೆ ಗೊಂಬನೆಂದರಿತರೆ ॥ 4 ॥

ಪವನನಯ್ಯನ ಕಥೆಯ ಕೇಳುವರಲ್ಲಿ
ದಿವಿಜ ಜೀವೇಶನ ಚಿಂತಿಸಿ
ಕವಿಭಿರೀಡಿತ ವಾಯು ದಿಗ್ದೇವತೆಗಳೊಳಗಿದ್ದು
ಶ್ರವಣ ಮಾಡಿಪನೆಂದು ಪ್ರಿಯದಿಂದರ್ಪಿಸಿದರೆ ॥ 5 ॥

ವಿಶ್ವ ತೈಜಸ ಪ್ರಾಜ್ಞರ ಕರ್ಮಗಳನ್ನು
ಚಿತ್ತದಿ ನೆರೆ ತಿಳಿದು
ವಿಶ್ವಾಸ ಮಾಡುತ ಹರಿಯ ತಕ್ಕೈಸುವ
ಕೃತ್ಯವ ತರಿದು ನಿದ್ರಿಸಬಲ್ಲವರಿಗೆಲ್ಲ ॥ 6 ॥

ದಿನದಿನಂಗಳೊಳಗೆ ಜೀವರು ಮಾಳ್ಪ
ಏನೇನು ಕರ್ಮಗಳ
ತಾನೇ ಸಾಕುವ ಗುರು ಪುರಂದರವಿಠ್ಠಲ
ದೀನರೊಳಿಹ ಪಾವನನೆಂದರಿತರೆ ॥ 7 ॥



# ಜೀವ ಅಸ್ವತಂತ್ರ

ಶ್ರೀವಿಜಯದಾಸರ ಸುಳಾದಿ

ಒಡಿಯಾ ನಿಲ್ಲಲಾವು ನಿಲುವೆವಯ್ಯಾ.
ಒಡಿಯಾ ನಡಿಯಲಾವು ನಡಿವೆವಯ್ಯಾ.
ಒಡಿಯಾ ನೋಡಲಾವು ನೋಳ್ಪೆವಯ್ಯಾ.
ಒಡಿಯಾ ನುಡಿಯಲಾವು ನುಡಿವೆವಯ್ಯಾ.
ಒಡಿಯಾ ಕೊಡಲಾವು ಕೊಡುವೆವಯ್ಯಾ.
ಒಡಿಯಾ ಕೇಳಲಾವು ಕೇಳ್ವೆವಯ್ಯಾ.
ಒಡಿಯಾ ಮಾಡಲಾವು ಮಾಳ್ಪೆವಯ್ಯಾ.
ಒಡಿಯಾ ಪಿಡಿಯಲಾವು ಪಿಡಿವೆವಯ್ಯಾ.
ಒಡಿಯಾ ಸುಮ್ಮನಾಹೆ ಆವು ಸುಮ್ಮನೆ ಎಲ್ಲಾ
ಒಡಿಯಾ ಕುಳ್ಳಿರಲಾವು ಕುಳ್ಳುವೆವಯ್ಯಾ.
ಒಡಿಯಾ ಓಡಲಾವು ಒಡನೆ ಓಡುವೆವಯ್ಯಾ
ಒಡಿಯಾ ಫಕ್ಕನೆ ನಿಲ್ಲಲಾವು ನಿಲ್ಲುವೆವಯ್ಯಾ
ಒಡಿಯಾ ವಾಸನೆ ಕೊಳಲಾವು ವಾಸನೆ ಕೊಂಬೆವಯ್ಯಾ.
ಒಡಿಯಾ ಕರವ ನೀಡಲಾವು ನೀಡುವೆವಯ್ಯಾ.
ಒಡಿಯಾ ತಿರುಗಲಾವು ತಿರುಗುವೆವಯ್ಯಾ.
ಒಡಿಯಾ ತಲೆದೂಗಲಾವು ತೂಗುವೆವಯ್ಯಾ.
ಒಡಿಯಾ ತುತ್ತುಗೊಳ್ಳಲು ಕೊಂಬೆವಯ್ಯಾ.
ಒಡಿಯಾ ಮೆಲ್ಲಲಾವು ಮೆಲುವೇವಯ್ಯಾ.
ಒಡಿಯಾ ಒಂದಡಿ ಇಡಲಾವು ಇಡುವೆವಯ್ಯಾ.
ಒಡಿಯಾ ಮುಟ್ಟಲಾವು ಮುಟ್ಟುವೆವಯ್ಯಾ.
ಒಡಿಯಾ ಬಿಡಲಾವು ಬಿಡುವೆವಯ್ಯಾ
ಒಡಿಯಾ ನಮ್ಮೊಳಗುಂಟು ಆವು ಒಡಿಯಾನೊಳಗೆ.
ಒಡಿಯಾ ನಮ್ಮಾಧೀನ ಆವು ವೊಡಿಯನಾಧೀನ.
ಒಡಿಯಾ ಸಿರಿಅರಸ ವಿಜಯವಿಠ್ಠಲರೇಯ
ಒಡಿಯಾ ಬಾಯಿತೆರೆಯಲಾವು ಬಾಯಿ ತೆರುವೆವಯ್ಯಾ ॥
ನೀ ನಡದರಾವು ನಡಿವೆವಯ್ಯಾ.

ನೀ ನುಡಿದರಾವು ನುಡಿವೆವಯ್ಯಾ.
ನೀ ಪಿಡಿದರಾವು ಪಿಡಿವೆವಯ್ಯಾ.
ನೀ ತಡದರಾವು ತಡಿವೆವಯ್ಯಾ.
ನೀ ನಿರ್ದಯವಾಗೆ ಅಜಭವ ಸುರಾದಿಗಳು
ಕಾಣಿಗೆ ಬಾರದೆ ಪೋಗುವರೋ
ನೀನೆ ಸ್ವತಂತ್ರ ಅನಾದಿ ಸ್ವಭಾವ
ನೀನೆ ಸೂತ್ರಾಮಣಿ ಗಣಕೆಂಬೋದೆ ಸಿದ್ಧ
ನೀನೆ ಜ್ಞಾನಗಮ್ಯ ವಿಜಯವಿಠ್ಠಲರೇಯ
ನೀ ನಡದರಾವು ನಡಿವೆವಯ್ಯಾ ॥

ಹರಿಯಿಂದ ನೋಡೋರು, ಹರಿಯಿಂದ ಕೊಂಬೋರು,
ಹರಿಯಿಂದ ಆಡೋರು, ಆಡಿಸಿಕೊಂಬೋರು,
ಹರಿಯಿಂದ ಕೇಳೋರು, ಕೇಳಿಸಿಕೊಂಬೋರು,
ಹರಿಯಿಂದ ಪಿಡಿವರು, ಪಿಡಿಸಿಕೊಂಬೋರು,
ಹರಿಯಿಂದ ನಡೆವರು, ನಡಿಸಿಕೊಂಬೋರು,
ಹರಿಯಿಂದ ಅಪ್ಪೋರು, ಅಪ್ಪಿಸಿಕೊಂಬೋರು,
ಹರಿಯಿಂದ ಹೇಳೋರು, ಹೇಳಿಸಿಕೊಂಬೋರು,
ಹರಿಯಿಂದ ಕೊಡುವರು, ಕೊಳ್ಳಿಸಿ ಕೊಂಬುವರೆಲ್ಲಾ
ಹರಿಯಿಂದ ಸರ್ವಪ್ರಯೋಜನ ಮಾಡೋರು, ಮಾಡಿಸಿಕೊಂಬೋರು
ಹರಿಕೊಡಲು ಉಂಟು ಕೊಡದಿದ್ದರೆ ಇಲ್ಲಾ
ಹರಿಯೇ ಪರಮಮುಖ್ಯ, ಹರಿ ವ್ಯಾಪಾರದ
ವಿರಹಿತ ತೃಣ ಒಂದು ಚರಿಸಲಾಪದೆ
ಸರ್ವಭೇದ ನಮ್ಮ ವಿಜಯವಿಠ್ಠಲನ್ನ
ಸ್ಮರಣೆ ಸಮಸ್ತ ವಿಧಿ ಎಂದು ತಿಳಿದಿರುವರೂ ॥

ನಿನ್ನಾಧೀನ ದೇಹ ಪ್ರಾಣೇಂದ್ರಿಯ ಕರ್ಮಾಚರಣೆ
ನಿನ್ನಾಧೀನ ಜ್ಞಾನ, ಇಚ್ಛೆ, ಪ್ರಯತ್ನ ಪರಿಪರಿ
ನಿನ್ನಾಧೀನ ಬುದ್ಧಿ, ಮತಿ, ಧೈರ್ಯ ಕೀರ್ತಿಶಕ್ತಿ
ನಿನ್ನಾಧೀನ ಜಪ ತಪೋ ದಾನ ಧ್ಯಾನ ನಿದಾನಾ

ನಿನ್ನಾಧೀನ ಅಭಯ ವಿರೋಗ ಯೋಗ ಭೋಗ.
ನಿನ್ನಾಧೀನ ಉಕುತಿ, ಯುಕುತಿ, ಭಕುತಿ ಮುಕ್ತಿ
ನಿನ್ನಾಧೀನ ವೈರಾಗ್ಯಭಾಗ್ಯ ವಸನ ಭೂಷಣ.
ನಿನ್ನಾಧೀನ ದೇಶ ಕೋಶ, ಓದು ಮಾಧುರ್ಯ
ನಿನ್ನಾಧೀನ ಬಾಲ್ಯ ಯೌವನ ವಾರ್ಧಕ್ಯ
ನಿನ್ನಾಧೀನ ಇಷ್ಟಾನಿಷ್ಟ ಪಾಪಪುಣ್ಯ
ನಿನ್ನಾಧೀನ ಪ್ರಕೃತಿ, ಕಾಲ, ವೇದ ಜೀವರು
ನಿನ್ನಾಧೀನ ಅಮಿಶ್ರ ಮಿಶ್ರಾತತ್ವ ತತ್ವದಾರ್ಥ
ನಿನ್ನಾಧೀನ ಕಾರ್ಯ ಕಾರಣ ಕಾರ್ಯ ಸಂಗತಿ.
ನಿನ್ನಾಧೀನ ನಾನಾ ವ್ಯಾಪಾರ ವ್ಯಕ್ತಾ ವ್ಯಕ್ತ
ನಿನ್ನಾಧೀನ ಯಾವತ್ತೂ ಬೊಮ್ಮಾಂಡ
ಅನಂತಾನಂತ ಕಲ್ಪ ಕಲ್ಪಾ ನಿನ್ನಾಧೀನ
ನಿನ್ನಾಧೀನ, ನಿನ್ನಾಧೀನ, ನಿನ್ನಾಧೀನ, ಒಂದೊಂದೆ ಎರಡೆ
ಏನೆಂತ ಪೇಳಲಿ ಎನ್ನೊಶವಲ್ಲ ಎಲೋ ದೇವರದೇವ
ಪನ್ನಗಶಯನ ವಿಜಯವಿಠ್ಠಲ
ಬಣ್ಣಿಸಲಾರೆನು ಭಕುತ ವತ್ಸಲ ॥



# ಯಾಕೆ ಬಂದೆಯೋ ಎಲೆ ಜೀವ.

ಶ್ರೀವಿಜಯದಾಸರ ಕೃತಿ

ಯಾಕೆ ಬಂದೆಯೋ ಎಲೆ ಜೀವ ನೀ
ನ್ಯಾಕೆ ಬಂದೆಯೋ ಎಲೆ ಜೀವ ಈ ॥ ಪ ॥

ಲೋಕದ ಅನುಭವ ಬೇಕಾಯ್ತೆ ನಿನಗೆ ॥ ಅ. ಪ ॥

ಮೇರು ಪರ್ವತದಲ್ಲಿ ವಾರಣವಂತನಾಗಿ
ಮಾರಮಣನ ಪಾದಭಜನೆಯ ಬಿಟ್ಟು ನೀ ॥ 1 ॥

ಹೊನ್ನು ಹೆಣ್ಣು ಮಣ್ಣು ಮೂರು ತನ್ನದಾದೀತೆಂದು
ಬನ್ನ ಸುಖವ ನಂಬಿ ಬಂದೆಯಾ ಜೀವ ॥ 2 ॥

ಆದದ್ದೆಲ್ಲಾಯಿತು ಹೋದ ಮಾತುಗಳ್ಯಾಕೆ
ಶ್ರೀದ ವಿಜಯವಿಠಲನ ನೆನೆಕಂಡ್ಯ ಮನವೇ ॥ 3 ॥

★★★

# ಜೀವ ಪರಮಾತ್ಮರ ವಿರುದ್ಧ ಧರ್ಮಗಳು (ವೈಲಕ್ಷಣ್ಯಗಳು)

| | ಪರಮಾತ್ಮ | ಜೀವ |
|---|---|---|
| 1. | ಈಶ | ದಾಸ |
| 2. | ಬಿಂಬ | ಪ್ರತಿಬಿಂಬ. |
| 3. | ಸ್ವತಂತ್ರ | ಅಸ್ವತಂತ್ರ. |
| 4. | ಆನಂದಮಯ | ದುಃಖೀ |
| 5. | ನಿತ್ಯ ಮುಕ್ತ | ಬದ್ಧ |
| 6. | ಸರ್ವಜ್ಞ | ಅಲ್ಪಜ್ಞ |
| 7. | ಸರ್ವಶಕ್ತ | ಅಶಕ್ತ (ಅಲ್ಪಶಕ್ತ) |
| 8. | ಸರ್ವತ್ರ ವ್ಯಾಪ್ತ | ಅಣುಸ್ವರೂಪೀ |
| 9. | ಸ್ವತಂತ್ರಕರ್ತ | ಪರಾಧೀನ ಕರ್ತ |
| 10. | ಬ್ರಹ್ಮಾದಿಗಳಿಂದ ಸ್ತುತ | ಬ್ರಹ್ಮಾದಿಗಳಿಂದ ರಕ್ಷಿತ. |
| 11. | ಪರಿಪೂರ್ಣ | ಅಪೂರ್ಣ |
| 12. | ಬಾಹ್ಯದೇಹವಿಲ್ಲದವ | ಬಾಹ್ಯದೇಹ ಅನಿತ್ಯ |
| 13. | ಸರ್ವಸ್ವಾಮಿಯು | ಸ್ವಂತದ್ದಾಗಿ ಏನೂ ಇಲ್ಲದವ. |
| 14. | ಸ್ವಾಮಿ ಇಲ್ಲದವ | ಸ್ವಾಮಿಯನ್ನು ಹೊಂದಿದವ. |
| 15. | ಜ್ಞಾನಾನಂದಾದಿ ದೇಹವುಳ್ಳವ | ಪಾಂಚಭೌತಿಕ ದೇಹವುಳ್ಳವ. |
| 16. | ಗುಣಪೂರ್ಣ | ಗುಣಹೀನ |
| 17. | ಲಕ್ಷ್ಮೀಪತಿ | ದರಿದ್ರ |
| 18. | ನಾಶರಹಿತ | ಮೃತ್ಯುವಶ |
| 19. | ದೋಷದೂರ | ದೋಷಪೂರ್ಣ |

★★★

## ಅನುಬಂಧ - 1

### ಜೀವರ ಅಪರೋಕ್ಷ ತಾರತಮ್ಯ ದರ್ಶನ★

| ಸಂಖ್ಯೆ | ಜೀವರ ವಿವರ | ಭಗವದ್ದರ್ಶನ ಅಪರೋಕ್ಷ ಪ್ರಮಾಣ | ಭಗವದ್ದರ್ಶನ ಕಾಂತಿ ವಿವರ | ಭಗವದ್ದರ್ಶನ ಕಾಲ ವಿವರ | ಮುಕ್ತಜೀವರ ದೇಹಕಾಂತಿ ವ್ಯಾಪ್ತಿ | ಗುಣೋಪಾಸನಾ ಕ್ರಮ |
|---|---|---|---|---|---|---|
| 1. | ತೃಣ ಕೀಟಾದಿ ಜೀವರು | ಒಂದು ಗೋದಿಕಾಳು | ಪ್ರದೀಪದ ಕಾಂತಿ | $^{3}/_{4}$ ಘಳಿಗೆ | 10 ಯೋಜನ | ಚಿದ್ರೂಪಾತ್ಮ (1) ಗುಣೋಪಾಸನೆ |
| 2. | ವೃಕ್ಷಾದಿ | ಒಂದು ಬೋರೆ ಹಣ್ಣಿನ ಪ್ರಮಾಣ | 10 ಪ್ರದೀಪ | 1 ಘಳಿಗೆ | 20 ಯೋಜನ | ನಿರ್ದೋಷ ಆತ್ಮ |
| 3. | ಖಗ,ಮೃಗ,ಪಶು ಗೋವು, ಆದಿಜೀವರು | ಅಂಗುಟ ಪರಿಮಿತ | 100 ಪ್ರದೀಪ | 1 ಘಳಿಗೆ | 20 ಯೋಜನ | ನಿರ್ದೋಷ ಚಿದಾತ್ಮ |
| 4. | ಶೂದ್ರ ಜೀವರು | ಅಂಗುಟ | – | 1 ಘಳಿಗೆ | 25 ಯೋಜನ | ನಿರ್ದೋಷ ಆನಂದ |
| 5. | ವೈಶ್ಯ ಜೀವರು | ಅಂಗುಟ | – | 1 ಘಳಿಗೆ | 30 ಯೋಜನ | ನಿರ್ದೋಷ ಆನಂದ |
| 6. | ಕ್ಷತ್ರಿಯ ಜೀವರು | ಅಂಗುಟ | – | 1 ಘಳಿಗೆ | 35 ಯೋಜನ | ನಿರ್ದೋಷ ಆನಂದ |
| 7. | ಮಾನುಷೋತ್ತಮ ಬ್ರಾಹ್ಮಣ ಜೀವರು | ಅಂಗುಟ | 1 ಮಿಂಚಿನಂತೆ | 2 ಘಳಿಗೆ | 40 ಯೋಜನ | 4 ಗುಣಗಳು |
| 8. | ಮಾನುಷ ಚಕ್ರವರ್ತಿಗಳು | ಅಂಗುಟ | 10 ಮಿಂಚಿನಂತೆ | 3 ಘಳಿಗೆ | 80 ಯೋಜನ | ಸಚ್ಚಿದಾನಂದಾತ್ಮ 6 ಗುಣಗಳು |
| 9. | ಮಾನುಷ ಗಂಧರ್ವರು | ಅಂಗುಟ | 20 ಮಿಂಚಿನಂತೆ | 4 ಘಳಿಗೆ | 240 ಯೋಜನ | 10 ಗುಣಗಳು |

| | | | | | | |
|---|---|---|---|---|---|---|
| 10. | ದೇವ ಗಂಧರ್ವರು | ಅಂಗುಟ | ಸೂರ್ಯ ಮಂಡಲ ಪ್ರಕಾಶ | 6 ಘಳಿಗೆ | ಮೇರು ಪರ್ಯಂತ 84 ಸಹಸ್ರ ಯೋಜನ | 1000 ಗುಣಗಳು |
| 11. | ಚಿರಪಿತೃಗಳು ಗೋಪಿಯರು ಕೃಷ್ಣಾಂಗ ಸಂಗಿಗಳು | ಅಂಗುಟ | 5 ಸಹಸ್ರ ಸೂರ್ಯಮಂಡಲ ಪ್ರಕಾಶ | 8 ಘಳಿಗೆ | ಭುವರ್ಲೋಕ ಉಪಸರ್ಗವರೆಗೆ | 10,000 ಗುಣ |
| 12. | ಶತೋನ ಶತಕೋಟಿ ಋಷಿಗಳು,ಅಗ್ನಿಪುತ್ರರು (16000) ಆಜಾನಜ ದೇವತೆಗಳು | ಅಂಗುಷ್ಠ | 10 ಸಹಸ್ರ ಸೂರ್ಯಮಂಡಲ ಪ್ರಕಾಶ | 10 ಘಳಿಗೆ | ಸ್ವರ್ಗಾಂತ್ಯವು | 1 ಲಕ್ಷ ಗುಣ ಉಪಾಸನೆ 1 ಕೋಟಿಗುಣ ಪರ್ಯಂತ |
| 13. | ಕರ್ಮಜ ದೇವತೆಗಳು | ಅಂಗುಷ್ಠ | 1 ಕೋಟಿ ಭಾನು ಮಂಡಲ | 15 ಘಳಿಗೆ | ಸಪ್ತದ್ವೀಪ ವಿರಾಟ ವಿಗ್ರಹ ಬ್ರಹ್ಮಾಂಡ ಖರ್ಪರದವರೆಗೆ | 1 ಕೋಟಿ ಗುಣದಿಂದ ಹೆಚ್ಚು |
| 14. | ಪುಷ್ಕರಾದಿ ಶಕ್ರಾಂತ್ಯ | ಅಂಗುಷ್ಠ | ಅರ್ಬುದ ಸೂರ್ಯ ಮಂಡಲ | 15 ಘಳಿಗೆ | ಬಿಸಜಭವಾಂಡ ಮನಸ್ತತ್ವಾಂತ | 1 ಅರ್ಬುದ ಗುಣಗಳು |
| 15. | ಬಿಸಿಗಣ್ಣ ಮಹದೇವ ಗರುಡ ಶೇಷ | ಅಂಗುಷ್ಠ | ಕೋಟಿ ಅರ್ಬುದ ಸೂರ್ಯ | 30 ಘಳಿಗೆ | ಅಹಂಕಾರ ತತ್ವ ಗುಣಗಳು | 1 ಖರ್ವ ಗುಣಗಳು |
| 16. | ಭಾರತೀ ಸರಸ್ವತಿಯರು | ಅಂಗುಷ್ಠ | ಅನಂತ ಸೂರ್ಯ | 60 ಘಳಿಗೆ | ಅವ್ಯಕ್ತಗುಣ ತ್ರಯಾಂತ | |
| 17. | ಋಜ್ವಾದಿ ವಾಯು ಬ್ರಹ್ಮದೇವರು | ಅಂಗುಷ್ಠ | ಅನಂತಾನಂತ ಸೂರ್ಯಪ್ರಕಾಶ | 60 ಘಳಿಗೆ | ಅವ್ಯಕ್ತ ತತ್ವಾವರಣ ಗುಣತ್ರಯಮೀರಿ ವಾಸುದೇವ ಆವರಣದವರೆಗೆ 100 ಮಡಿ. | ಅನಂತವೇದೋಕ್ತ ಅನುಕ್ತ ಅನಂತ ಗುಣೋಪಾಸನೆ |

★(''ತತ್ವಸಾರ' ಗ್ರಂಥದಿಂದ ಉದ್ಧೃತ)

# ಗ್ರಂಥಋಣ

1. ಶ್ರೀಮದ್ ಭಾಗವತ ತೃತೀಯಸ್ಕಂಧ -
   ಶ್ರೀಮತ್ಪೂಜ್ಯ ಪಂ ।। ಗುತ್ತಲ ರಂಗಾಚಾರ್ಯರು
2. ಶ್ರೀಮದ್ ಭಾಗವತ ದ್ವಿತೀಯಸ್ಕಂಧ -
   ಶ್ರೀ ದಿ।। ಎನ್. ಕೃಷ್ಣಮೂರ್ತಿ
3. ಶ್ರೀಹರಿಕಥಾಮೃತಸಾರ -
   ಡಾ।। ವ್ಯಾಸನಕೆರೆ ಪ್ರಭಂಜನಾಚಾರ್ಯರು
4. ಉಪನಿಷತ್ ಭಾಷ್ಯಗಳು -
   ಅ. ಭಾ. ಮಾ ಮ.ಮಂಡಲ ಪ್ರಕಾಶಿತ
5. ಬ್ರಹ್ಮಸೂತ್ರಭಾಷ್ಯ -
   ದಿ।। ಪಂ।। ಸಂತೆಬೆನ್ನೂರು ಭೀಮಸೇನಾಚಾರ್ಯರು
6. ಮುಕ್ತಿ ತತ್ವ -
   ಪೂರ್ಣಪ್ರಜ್ಞಸಂಶೋಧನ ಮಂದಿರ ಪ್ರಕಾಶಿತ
7. ಜಿತಂತೇ ಸ್ತೋತ್ರ - ,,
8. ತತ್ವಸಾರ - -- ,,
9. ಅಧ್ಯಾತ್ಮರಸರಂಜಿನಿ -
   ದ್ವೈತವೇದಾಂತ ಫೌಂಡೇಶನ್ ಪ್ರಕಾಶಿತ
10. ಹರಿದಾಸರ ಕೃತಿಗಳು -
    ಸಮಗ್ರದಾಸ ಸಾಹಿತ್ಯ ಕರ್ನಾಟಕ ಸರಕಾರ ಪ್ರಕಟಿತ

